ಶ್ರೀ ಶಂಕರಭಗವತ್ಪಾದಾಯತೇನಮಃ

# ಅಷ್ಟೋಪನಿಷತ್

(ಕನ್ನಡ ತಾತ್ಪರ್ಯ ಸಹಿತ)




ಲೇಖಕ :

ಮಿ. ಚೌ. ರಾಮರಾವ್

M. C. RAMA RAO

16/226, MALAVIANAGAR

NEW DELHI.

ಶ್ರೀ ಶ್ರೀ ಜಗದ್ಗುರು ಶಂಕರಾಚಾರ್ಯ ಮಹಾಸಂಸ್ಥಾನಂ
ಶಾರದಾಪೀಠಂ, ಶೃಂಗೇರಿ.

Privae Secretary
To His Holiness Sri Jagadguru
Sri Shankaracharya, Dakshinamnaya
Sri Sharada Peetham,
Sringeri-577139. Karnataka.

Reff. No. 6901
(Camp)
ಹೈದರಾಬಾದ್
Date 21-8-77

ಶ್ರೀ ಎಂ. ಸಿ. ರಾಮರಾವ್‌ರವರಿಗೆ ವಂದನೆಗಳು.

ನಿಮ್ಮ ತಾ॥ 13–8–77ರ ಪತ್ರ ತಲಪಿತು. ನೀವು ಉಪನಿಷತ್ತುಗಳನ್ನು ಕನ್ನಡಕ್ಕೆ ಅನುವಾದಿಸಿ ಅಚ್ಚಿಗೆ ಕೊಡಲಾಗಿರುವ ವಿಷಯವನ್ನು ಶ್ರೀ ಶ್ರೀಗಳವರಲ್ಲಿ ಅರಿಕೆಮಾಡಲಾಯಿತು.

ವಿಷಯವನ್ನು ತಿಳಿದು ಶ್ರೀ ಶ್ರೀಗಳವರು ಸಂತೋಷಪಟ್ಟರು. ತಮ್ಮ ಉದ್ದೇಶವು ಸಫಲವಾಗಲೆಂದು ಶ್ರೀಗಳವರು ಆಶೀರ್ವದಿಸಿರುತ್ತಾರೆ.

ಶ್ರೀ ಶ್ರೀಗಳವರ ನಾರಾಯಣಸ್ಮರಣಪೂರ್ವಕ ಆಶೀರ್ವಾದಗಳನ್ನು ತಿಳಿಸುತ್ತಿದ್ದೇನೆ.

ಇತಿ,

(Sd.) Giridhara Sastry
*Private Secretary.*

# ಅನುಕ್ರಮಣಿಕೆ







# ಪೀಠಿಕೆ

ನಾನು ದೆಹಲಿಗೆ ನನ್ನ ಹಿರಿಯಮಗನ ಬಳಿ ವಾರ್ಧಕ್ಯವನ್ನು ಕಳೆಯಲು ಬಂದಾಗಿನಿಂದ ಹೌಸ್‌ಕಾಸಿನಲ್ಲಿರುವ ಅರವಿಂದಾಶ್ರಮದಲ್ಲಿ ಪ್ರತಿ ಭಾನುವಾರವೂ ನಡೆಯುವ ಪ್ರಾರ್ಥನಾಸಭೆಯಲ್ಲಿ ಉಪನಿಷದ್ವಾಚನವನ್ನು ಮಾಡುತ್ತಿದ್ದೇನೆ. ಶ್ರಾವಕರು ಬಹಳ ಭಕ್ತಿಯಿಂದ ವಾಚನವನ್ನು ಕೇಳಿ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದಾರೆ. ಇದೇ ಸಂತೋಷವನ್ನು ನಮ್ಮ ಕನ್ನಡನಾಡಿನ ಬಳಗಕ್ಕೆ ಅದರಲ್ಲೂ ಹಿಂದುಳಿದಿರುವ ಪರಿಗಣಿತವರ್ಗದವರಿಗೆ ಒದಗಿಸಲು ಸಂಕಲ್ಪಿಸಿ ಎಂಟು ಉಪನಿಷತ್ತುಗಳನ್ನು ಆರಿಸಿ ಸಂಸ್ಕೃತ ಶ್ಲೋಕಗಳನ್ನು ಕನ್ನಡದಲ್ಲಿ ಬರೆದು ಕನ್ನಡದ ಅದರ ಅರ್ಥವನ್ನೂ ಈ ಪುಸ್ತಕದಲ್ಲಿ ಬರೆದಿರುತ್ತೇನೆ. ಉಪನಿಷತ್ತು ಮಹಾಗ್ರಂಥ. ಅದರ ಅಂತರಾರ್ಥಗಳನ್ನು ವಿಮರ್ಶಿಸಿ ಬರೆಯುವುದು ನನ್ನಂತಹ ಅಲ್ಪನ ಕೈಲಿ ಸಾಧ್ಯವಿಲ್ಲವಾದ್ದರಿಂದ ಸ್ಥೂಲವಾದ ಅರ್ಥವನ್ನು ಮಾತ್ರ ತಿಳಿಸಿರುತ್ತೇನೆ. ಓದುಗರು ಅವರವರ ಜ್ಞಾನ ಮತ್ತು ಪ್ರತಿಭೆಗೆ ತಕ್ಕಹಾಗೆ ವಿಸ್ತರಿಸಿಕೊಂಡು ಆನಂದಪಡಲು ಕೋರುತ್ತೇನೆ. ಉಪನಿಷತ್ತುಗಳು ಅನೇಕವಿದ್ದು ಅವುಗಳಲ್ಲಿ ಕೆಲವಕ್ಕೆ ಶೃಂಗೇರಿಯ ಶಂಕರಾಚಾರ್ಯರೂ, ರಾಮಕೃಷ್ಣಾಶ್ರಮದ ಯತಿವರ್ಯರೂ, ಹೊಳೇನರಸೀಪುರದ ಯಳ್ಳಂಬಳಸೆ ಸುಬ್ರಹ್ಮಣ್ಯಶರ್ಮರೂ ವ್ಯಾಖ್ಯಾನಗಳನ್ನು ರಚಿಸಿದ್ದಾರೆ. ಉಪನಿಷತ್ತುಗಳು ಶಕ್ತಿಯ ಮಹಾಗಣಿ. ಇಡೀ ಪ್ರಪಂಚವನ್ನೇ ವೀರ್ಯವತ್ತಾಗಿ ಮಾಡಲು ಅಗತ್ಯವಾದ ಶಕ್ತಿ ಅದರಲ್ಲಿದೆ ಅವುಗಳ ಮೂಲಕ ಎಲ್ಲ ಜನಾಂಗಗಳ, ಎಲ್ಲ ಮತಗಳ ಎಲ್ಲ ಪಂಥಗಳ ನಿರ್ಬಲರನ್ನೂ ದಲಿತರನ್ನೂ, ಆರ್ತರನ್ನೂ ಚೇತನಗೊಳಿಸಬಹುದು, ಶಕ್ತಿವಂತರನ್ನಾಗಿ ಮಾಡಬಹುದು ಮತ್ತು ಪ್ರಜ್ಞಾವಂತರನ್ನಾಗಿ ಮಾಡಬಹುದು ದೈಹಿಕ ಸ್ವಾತಂತ್ರ್ಯ, ಬುದ್ಧಿ ಸ್ವಾತಂತ್ರ್ಯ, ಆಧ್ಯಾತ್ಮಿಕ ಸ್ವಾತಂತ್ರ್ಯ ಇವೇ ಉಪನಿಷತ್ತಿನ ಸೂತ್ರವಾಕ್ಯಗಳು. ಇದು ಸಂಸಾರಬೀಜವಾದ ಅವಿದ್ಯೆಯನ್ನು ನೀಗಿಸುತ್ತದೆ. ಉಪನಿಷತ್ ಎಂದರೇನು ? ಇದಕ್ಕೆ ಸರಿಯಾದ ಭಾಷ್ಯಾರ್ಥ ಶಿಷ್ಯನೇ ಬಂದು ಕುಳಿತುಕೋ, ಜ್ಞಾನವನ್ನು ಕಲಿ ಎಂಬುದಾಗಿರುತ್ತೆ. ಇದು

ಗುರುಶಿಷ್ಯರ ನಡುವೆ ಇರಬೇಕಾದ ಅತ್ಯಂತ ಆತ್ಮೀಯ ಸಂಪರ್ಕವನ್ನು ಸೂಚಿಸುತ್ತದೆ. ಸಾಮಾನ್ಯವಾಗಿ ಶೃತಿ ಎಂದರೆ ವೇದಗಳು. ನಿರ್ದಿಷ್ಟವಾಗಿ ಅದರ ಅರ್ಥ ಉಪನಿಷತ್ತುಗಳು ಎಂದೇ, ಅವು ವೇದಗಳ ಅಂತ ಎಂದರೆ ಕೊನೆ ಅಥವಾ ವೇದಗಳ ಸಾರ. ಸನಾತನ ಧರ್ಮವನ್ನು ನಿರೂಪಿಸುವುದೇ ಶೃತಿಗಳು. ಶೃತಿಗಳಲ್ಲಿನ ಸತ್ಯಗಳನ್ನು ಅನೇಕ ಋಷಿಗಳೂ ನಿರೂಪಿಸಿರುತ್ತಾರೆ. ಈ ಋಷಿಗಳಲ್ಲಿ ಪುರುಷರೂ ಸ್ತ್ರೀಯರೂ ಕೂಡ ಇದ್ದಾರೆ. ಇವರ ವೈಯಕ್ತಿಕ ಜೀವನ ವಿವರಗಳು ಉಪನಿಷತ್ತುಗಳಿಂದ ತಿಳಿಯಬರುವುದಿಲ್ಲವಾದರೂ ಅವರ ಯಶಸ್ಸು ಕೆಲಸಮಾಡಿದ ರೀತಿಯ ಸುಳಿವು ಅಲ್ಲಿ ಸಿಕ್ಕುತ್ತದೆ. ಇದನ್ನು ಅರ್ಥಮಾಡಿಕೊಂಡಲ್ಲದೆ ಭಾರತದ ಇತಿಹಾಸ ಮತ್ತು ಸಂಸ್ಕೃತಿಗಳ ಬಗೆಗೆ ಒಂದು ಒಳದೃಷ್ಟಿಯನ್ನು ಪಡೆಯುವುದು ಅಸಾಧ್ಯ. ಶ್ರದ್ಧಾವಂತರಾದ ಪ್ರಾಮಾಣಿಕರಾದ ಗುರುಶಿಷ್ಯರ ಪ್ರಭಾವಶಾಲೀ ನಡೆವಳಿಕೆಗಳ ಫಲವಾಗಿ ಉಪನಿಷತ್ತುಗಳು ಚೈತನ್ಯ, ಸೃಜನಶಕ್ತಿಗಳ ನಿರಂತರ ಚಿಲುಮೆ. ಮಾನವ ವ್ಯಕ್ತಿತ್ವದ ಅನಂತ ಆಯಾಮವೂ ಶಾಶ್ವತ ವಸ್ತುವೂ ಆದ ಆತ್ಮದ ತಿಳುವಳಿಕೆಗಳು ಎಂದು ಕಂಡುಬಂದಿದೆ, ಈ ಉಪನಿಷತ್ತುಗಳು ಸಾಧಾರಣವಾಗಿ ಐದು ಭಾಗಗಳಲ್ಲಿ ಪ್ರಕಟವಾದವು ಅವುಗಳೆಂದರೆ– (1) ಪ್ರಪಂಚದ ವಿಚಾರ (2) ಅಗ್ನಿಯ ವಿಚಾರ (3) ಜ್ಞಾನದ ವಿಚಾರ (4) ಸಂತಾನದ ವಿಚಾರ ಮತ್ತು (5) ಆತ್ಮದ ವಿಚಾರ. ಈ ಐದು ಭಾಗಗಳೂ ಮುಂದೆ ಪ್ರತಿಯೊಂದೂ ಐದು ಐದು ಭಾಗಗಳಾಗಿ ವಿಂಗಡಿಸಲ್ಪಟ್ಟಿತು. ಅವುಗಳೆಂದರೆ (1) ಮೊದಲನೆಯ ರೂಪ (2) ಎರಡನೆಯ ರೂಪ (3) ಇವೆರಡು ರೂಪಗಳ ಬೆಸುಗೆ (4) ಈ ಬೆಸುಗೆಗೆ ಬೇಕಾದ ಜ್ಞಾನ ಮತ್ತು (5) ಬೆಸುಗೆಯಿಂದ ಆದ ಫಲ.

ಮಾನವನ ಹೃದಯವು ಇಹದ ಮತ್ತು ಪರದ ಎಲ್ಲ ಸುಖಗಳಾದ ಬಯಕೆಗಳಿಗೂ ನಿವಾಸಸ್ಥಾನ. ಆದ್ದರಿಂದ ಅದು ಅವನ ಮನಸ್ಸು ಹೊರಮುಖವಾಗುವ ಪ್ರವೃತ್ತಿಯನ್ನುಂಟುಮಾಡಿದೆ. ಈ ಪ್ರವೃತ್ತಿ ಮತ್ತು ಅದರಿಂದ ಮೂಡುವ ಎಲ್ಲ ಚಟುವಟಿಕೆಗಳಿಗೂ ಕಾರಣವಾದ ಚಾಲಕ ಶಕ್ತಿ ಬಯಕೆಯ ಭಾವನೆ. ಹೀಗೆ ಮಾನವನು- ಅನಾತ್ಮದ, ವಿನಾಶಿಯಾದುದರ.

ಪಲಯದಲ್ಲಿ ಬದುಕಿ ಅಲ್ಲಿ ಸಂಚರಿಸುತ್ತಿರುವಾಗ ಅವನು ಮೃತ್ಯುವಿನ ಆಳ್ವಿಕೆ ಯಲ್ಲಿದ್ದಾನೆಂದು ಹೇಳಬಹುದು. ಏಕೆಂದರೆ ಹತ್ತಿರದಿಂದ ಪರೀಕ್ಷಿಸಿದಾಗ ಮೃತ್ಯು ಎಂಬುದು ದೇಹದ ಪತನವಲ್ಲ ; ಮಾನವರು ಬದುಕಿ ಬಾಳುತ್ತಿರುವ ನಿತ್ಯವಾದ ಆಧ್ಯಾತ್ಮಿಕ ಅಂಧತೆ ಎಂದು ಕಾಣುತ್ತದೆ. ಸತ್ಯಾನ್ವೇಷಿಗಳಿಗೆ ಮೊದಲನೆಯದಕ್ಕಿಂತ ಹೆಚ್ಚಾಗಿ ಎರಡನೆಯ ಮೃತ್ಯುವಿನ ವಿಷಯದಲ್ಲೇ ಹೆಚ್ಚಿನ ಭಯ. ನೈತಿಕ ಶಿಕ್ಷಣದ ಪ್ರಭಾವದಿಂದ ಈ ಚಟುವಟಿಕೆಗಳೂ ಅವುಗಳ ಹಿಂದಿನ ಪ್ರವೃತ್ತಿಗಳೂ ಅಂತರ್ಮುಖತೆಯನ್ನು ಪಡೆದುಕೊಳ್ಳು ತ್ತವೆ. ಪರಿಣಾಮವಾಗಿ ಒಳಗೆ ಅಸ್ಪಷ್ಟವಾದ ಹೊಸ ಹಸಿವು ಉತ್ಪನ್ನ ವಾಗುತ್ತದೆ. ಇದೇ ಆಧ್ಯಾತ್ಮಿಕ ಹಸಿವು. ಸಕಲ ಕಾಲಗಳಲ್ಲೂ ಮಾನವನನ್ನು ಪೀಡಿಸಿರುವ ಹಸಿವು, ಅವನ ಸೃಜನಶೀಲ ಜೀವನಕ್ಕೆ ಹೊಸತನವನ್ನು ನೀಡುವ ಹಸಿವು, ಸ್ವರ್ಗಸಾಮ್ರಾಜ್ಯ, ಮೃತ್ಯುರಹಿತ ಸ್ಥಿತಿ ನಿಮ್ಮೊಳಗೇ ಇದೆ ಎಂಬ ಜ್ಞಾನವನ್ನು ನೀಡುವ ಹಸಿವು. ವ್ಯಕ್ತಿಯು ತಾನು ಪಡೆದುಕೊಂಡ ಈ ನೈತಿಕ ಜಾಗೃತಿಗೆ ಓಗೊಟ್ಟು ಇಂದ್ರಿಯಗಳನ್ನು ಹತೋಟಿಯಲ್ಲಿಡತೊಡ ಗಿದರೆ ಆಗ ತನ್ನಲ್ಲಿಯೇ ಇರುವ ಆಳವಾದ ಆಧ್ಯಾತ್ಮಿಕ ಮಟ್ಟಗಳಿಗೆ ತನ್ನ ಸ್ವಪ್ರಜ್ಞೆಯ ಕೇಂದ್ರವನ್ನು ವರ್ಗಾಯಿಸುತ್ತಾನೆ. ಇದನ್ನು ವೇದಾಂತವು ಗುರುತಿಸುತ್ತದೆ. ಅಲ್ಲದೆ ತನ್ನ ಆತ್ಮವನ್ನು ಸಾಕ್ಷಾತ್ಕಾರಮಾಡಿಕೊಳ್ಳುವುದೇ ಪರಮ ಗುರಿ ಎಂದು ತಿಳಿಯುತ್ತಾನೆ.

ಭಾರತದೇಶದ ಉಪಾಧ್ಯಕ್ಷರೂ ಕರ್ಣಾಟಕದ ಜನಪ್ರಿಯ ನಾಯಕರೂ ಆದ ಬಿ. ಡಿ. ಜತ್ತಿಯವರಿಗೆ ಈ ಪುಸ್ತಕದ ಹಸ್ತಪ್ರತಿಯನ್ನು ತೋರಿಸಲು ಅವರು ಇದನ್ನು ಪರಿಶೀಲಿಸಿ ಸುಲಭವಾದ ಕನ್ನಡ ಪದಗಳಿಂದ ಅರ್ಥವನ್ನು ತಿಳಿಸಿರುವುದನ್ನು ಮೆಚ್ಚಿ ಇದನ್ನು ಅಗತ್ಯವಾಗಿ ಅಚ್ಚುಮಾಡಿಸಬೇಕೆಂದು ಹರಸಿ ಪ್ರೋತ್ಸಾಹಿಸಿರುತ್ತಾರೆ. ಅವರಿಗೆ ನನ್ನ ಅನಂತವಂದನೆಗಳನ್ನು ಮೊದಲನೆಯದಾಗಿ ಅರ್ಪಿಸುತ್ತೇನೆ,

ದಕ್ಷಿಣಾಮ್ನಾಯ ಮಹಾಪೀಠಸ್ಥರಾದ ಶೃಂಗೇರಿಯ ಗುರುವರೇಣ್ಯ ರಾದ ಶ್ರೀ ಶ್ರೀ ಅಭಿನವವಿದ್ಯಾತೀರ್ಥ ಮಹಾಸ್ವಾಮಿಗಳು ತಾರೀಖು 16–4–77ನೆಯ ಸ್ಥಿರವಾರ ದೆಹಲಿಯಲ್ಲಿ ಮೊಕ್ಕಾಂ ಮಾಡಿದಾಗ ನಾನು

ಬರೆದಿರುವ ಉಪನಿಷತ್ತುಗಳನ್ನು ಪರಾಂಬರಿಸಿ ಮೆಚ್ಚಿ ಅನುಗ್ರಹಮಾಡಿರು ತ್ತಾರೆ ಇದಕ್ಕಾಗಿ ಶ್ರೀಗಳವರ ಚರಣಸನ್ನಿಧಿಯಲ್ಲಿ ನಮಿಸುತ್ತೇನೆ.

ಇದೇ ರೀತಿ ಕಾಶಿ ನಗರದಲ್ಲಿ ತಾರೀಖು 24–9–70ರಲ್ಲಿ ಬಿಡದಿ ಮಾಡಿದ್ದ ಪೇಜಾವರ ಮಠಾಧೀಶರಾದ ಶ್ರೀ ಶ್ರೀ ವಿಶ್ವೇಶತೀರ್ಥ ಶ್ರೀಪಾದಂಗಳವರೂ ಈ ಉಪನಿಷತ್ತುಗಳನ್ನು ಪರಿಶೀಲಿಸಿ ತಮ್ಮ ಮೆಚ್ಚುಗೆ ಯನ್ನು ವ್ಯಕ್ತಪಡಿಸಿದ್ದರು. ಅದಕ್ಕಾಗಿ ಅವರ ಶ್ರೀ ಚರಣಗಳಿಗೂ ವಂದಿಸುತ್ತೇನೆ.

ಈ ಗ್ರಂಥವನ್ನು ಮುದ್ರಿಸಿಕೊಡಲು ಜಯನಗರದ ಮೂರನೆ ಬ್ಲಾಕಿನಲ್ಲಿರುವ ಶ್ರೀ ಶಾರದಾ ಮುದ್ರಣಾಲಯದ ಮಾಲೀಕರಾದ ಶ್ರೀ ಹೆಚ್. ಎಸ್. ಪ್ರಸನ್ನಯ್ಯನವರು ಒಪ್ಪಿಕೊಂಡು ಅಂದವಾಗಿ ಮುದ್ರಿಸಿ ಕೊಟ್ಟಿರುತ್ತಾರೆ, ಅದಕ್ಕಾಗಿ ಅವರಿಗೆ ನನ್ನ ಅನೇಕ ವಂದನೆಗಳು.

ಈ ಮಹಾಕಾರ್ಯಕ್ಕೆ ನೆರವಾದ ನನ್ನ ಆತ್ಮಜರೆಲ್ಲರಿಗೂ ಬ್ರಹ್ಮಜ್ಞಾನ ಸಿದ್ಧಿಸಲಿ ಎಂದು ಹಾರೈಸುತ್ತೇನೆ,

ಜಯನಗರದ ಶ್ರೀ ಶಂಕರಜಯಂತಿ ಮಂಡಲಿಯವರು ಈ ಗ್ರಂಥ ವನ್ನು ಪ್ರಚಾರಪಡಿಸಲು ದಯವಿಟ್ಟು ಒಪ್ಪಿರುತ್ತಾರೆ. ಅವರಿಗೆ ಭಗವಂತನು ದೀರ್ಘಾಯುರಾರೋಗ್ಯಾದಿಗಳನ್ನೂ ಬ್ರಹ್ಮಜ್ಞಾನವನ್ನೂ ಕರುಣಿಸಲೆಂದು ಹಾರೈಸುತ್ತೇನೆ.

ವಿಶ್ವಾಸಿ,

**ಎಂ. ಚ. ರಾಮರಾವ್.**



ಓಂ ಭದ್ರಂ ಕರ್ಣೇಭಿಃ ಶೃಣುಯಾಮ ದೇವಾಃ
ಭದ್ರಂ ಪಶ್ಯೇಮಾಕ್ಷಭಿರ್ಯಜತ್ರಾಃ ।
ಸ್ಥಿರೈರಂಗೈಸ್ತುಷ್ಟುವಾಂಸಸ್ತನೂಭಿಃ
ವ್ಯಶೇಮ ದೇವಹಿತಂ ಯದಾಯುಃ ॥

ಓಂ ಶಾಂತಿಃ ಶಾಂತಿಃ ಶಾಂತಿಃ

# ಈಶಾವಾಸ್ಯೋಪನಿಷತ್

**ಓಂ ಈಶಾವಾಸ್ಯಮಿದಂಸರ್ವಂ ಯತ್ಕಿಂಚಜಗತ್ಯಾಂಜಗತ್ ।**
**ತೇನತ್ಯಕ್ತೇನಭುಂಜೀಥಾ ಮಾಗೃಧಃ ಕಸ್ಯಸ್ವಿದ್ಧನಂ ॥**

ಈ ಕ್ಷಣಿಕವಾದ ಜಗತ್ತಿನಲ್ಲಿ ಬದಲಾವಣೆಹೊಂದುವಂತಹುದು ಏನಿದೆಯೋ ಅದೆಲ್ಲವೂ ಭಗವಂತನಿಂದ ಆವರಿಸಬೇಕು. ಈ ತ್ಯಾಗದಿಂದಲೇ ನೀನು ಅವಲಂಬನಪಡೆ. ಬೇರೊಬ್ಬರ ಐಶ್ವರ್ಯಕ್ಕಾಗಿ ಆಸೆಪಡಬೇಡ.

**ಕುರ್ವನ್ನೇವೇಹಕರ್ಮಾಣಿ ಜಿಜೀವಿಷೇಚ್ಛತಂಸಮಾಃ ।**
**ಏವಂತ್ವಯಿ ನಾನ್ಯಥೇತೋಽಸ್ತಿ ನಕರ್ಮಲಿಪ್ಯತೇನರೇ ॥**

ಈ ಜಗತ್ತಿನಲ್ಲಿ ಕರ್ಮಮಾಡುತ್ತಲೇ ನೂರುವರ್ಷಗಳಕಾಲ ಬದುಕುವ ಅಪೇಕ್ಷೆಯನ್ನು ತಾಳಬೇಕು. ಕರ್ಮದ ದೋಷದಿಂದ ಮುಕ್ತನಾಗಲು ಮಾನವನಿಗಿರುವುದು ಇದೊಂದೇ ದಾರಿ. ಬೇರೆ ಯಾವುದೂ ಇಲ್ಲ.

**ಅಸುರ್ಯಾನಾಮತೇಲೋಕಾ ಅಂಧೇನ ತಮಸಾವೃತಾಃ ।**
**ತಾಂಸ್ತೇ ಪ್ರೇತ್ಯಾಭಿಗಚ್ಛನ್ತಿ ಯೇಕೇಚಾತ್ಮಹನೋಜನಾಃ ॥**

ಆತ್ಮಹಾನಿಯನ್ನುಂಟುಮಾಡುವವರು ಮರಣಾನಂತರ ಕತ್ತಲಿನಿಂದ ಆವೃತವಾದ ಅಸುರರಜಗತ್ತಿಗೆ ಬಂದು ಬೀಳುವುದು ಖಂಡಿತ. ॥

**ಅನೇಜದೇಕಂ ಮನಸೋ ಜವೀಯೋ ನೈನದ್ದೇವಾ ಅಪ್ನುವರ್ನ್ ಪೂರ್ವ ಮರ್ಷತ್ ।**
**ತದ್ಧಾವತೋಽನ್ಯಾನತ್ಯೇತಿ ತಿಷ್ಠತ್ತಸ್ಮಿನ್ ಅಪೋಮಾತರಿಶ್ವಾದಧಾತಿ॥**

ಆತ್ಮವು ಒಂದು, ಅದು ಚಲಿಸುವುದಿಲ್ಲ. ಆದರೂ ಅದು ಮನಸ್ಸಿಗಿಂತ ವೇಗವಾದದ್ದು. ಹೀಗೆ ವೇಗವಾಗಿ ಚಲಿಸುತ್ತ ಅದು ಇಂದ್ರಿಯಗಳ ಗ್ರಹಣ ವನ್ನು ಮೀರಿದೆ. ತಾನು ಸ್ಥಿರವಾಗಿದ್ದು ಓಡುವ ಇತರ ಎಲ್ಲವನ್ನೂ ಮೀರು ತ್ತದೆ. ಸುಮ್ಮನೆ ಇದ್ದೇ ವಿಶ್ವಶಕ್ತಿಯಿಂದ ಅದು ಎಲ್ಲ ಜೀವಿಗಳ ಚಟುವಟಿಕೆ ಗಳಿಗೂ ಶಕ್ತಿಯನ್ನು ನೀಡುತ್ತದೆ.

**ತದೇಜತಿ ತನ್ನೈಜತಿ ತದ್ದೂರೇ ತದ್ವದಂತಿಕೇ ।**
**ತದಂತರಸ್ಯಸರ್ವಸ್ಯ ತದು ಸರ್ವಸ್ಯಾಸ್ಯಬಾಹ್ಯತಃ ॥**

ಅದು ಚಲಿಸುತ್ತದೆ, ಅದು ಅಚಲವಾಗಿಯೂ ಇರುತ್ತದೆ. ಅದು ಹತ್ತಿರದಲ್ಲೂ ಇದೆ; ದೂರದಲ್ಲೂ ಇದೆ ; ಆದರೂ ವಾಸ್ತವವಾಗಿ ಅದು ಎಲ್ಲದರ ಒಳಗೂ ಹೊರಗೂ ಇದೆ.

**ಯಸ್ತುಸರ್ವಾಣಿಭೂತಾನಿ ಆತ್ಮನ್ಯೇವಾನುಪಶ್ಯತಿ ।**
**ಸರ್ವಭೂತೇಷುಚಾತ್ಮಾನಂ ತತೋನವಿಜುಗುಪ್ಸತೇ ॥**

ಈ ಎಲ್ಲ ಜೀವಿಗಳೂ ತನ್ನ ಆತ್ಮನಿಂದ ಬೇರೆಯಲ್ಲ. ತನ್ನ ಆತ್ಮವೂ ಇತರ ಜೀವಿಗಳಿಗಿಂತ ಬೇರೆಯಲ್ಲ_ಎಂದು ಅರಿತ ಜ್ಞಾನಿಯು, ಆ ಜ್ಞಾನದ ಬಲದಿಂದಾಗಿ ಯಾರನ್ನೂ ದ್ವೇಷಿಸದ ಸ್ಥಿತಿಯನ್ನು ಮುಟ್ಟುತ್ತಾನೆ.

**ಯಸ್ಮಿನ್ ಸರ್ವಾಣಿಭೂತಾನಿ ಆತ್ಮೈವಾಭೂದ್ವಿಜಾನತಃ ।**
**ತತ್ರಕೋಮೋಹಃ ಕಶ್ಶೋಕ ಏಕತ್ವಮನುಪಶ್ಯತಃ ॥**

ಎಲ್ಲ ಜೀವಿಗಳೂ ತನ್ನ ಆತ್ಮವೇ ಎಂಬುದನ್ನು ತಿಳಿ. ಸಕಲ ಸೃಷ್ಟಿಯ ಏಕತೆಯನ್ನು ಕಂಡ ಜ್ಞಾನಿಗೆ ಯಾವ ಮೋಹ ಮತ್ತು ಶೋಕ ತಾನೇ ಇರುವುದು !

**ಸಪರ್ಯಗಾಚ್ಛುಕ್ರಮಕಾಯಮವ್ರಣಮಸ್ನಾವಿರಂ**
**ಶುದ್ಧಮಪಾಪವಿದ್ಧಂ ।**
**ಕವಿರ್ಮನೀಷೀಪರಿಭೂಃ ಸ್ವಯಂಭೂಃ ಯಥಾತಥ್ಯತೋಽರ್ಥಾನ್**
**ವ್ಯದದಾಚ್ಛಾಶ್ವತೀಭ್ಯಃ ಸಮಾಭ್ಯಃ ॥**

ಅವನು ಸರ್ವವ್ಯಾಪಿ ಜ್ಯೋತಿರ್ಮಯನು, ಶರೀರವಿಲ್ಲದವನು, ವ್ರಣ ವಿಲ್ಲದವನು, ನರಗಳಿಲ್ಲದವನು, ಶುದ್ಧನು, ಪಾಪದ ಹೊಡೆತವಿಲ್ಲದವನು, ಕವಿಯು, ಸರ್ವಜ್ಞನು, ಸರ್ವೋತ್ತಮನು, ಸ್ವಯಂಭು, ಅವನು ಶಾಶ್ವತ ರಾದ ಪ್ರಜಾಪತಿಗಳಿಗೆ ಅವರವರ ಕರ್ತವ್ಯವನ್ನು ಯಥಾರೂಪವಾಗಿ ಹಂಚಿ ಕೊಟ್ಟಿರುತ್ತಾನೆ.

**ಅನ್ಧಂತಮಃಪ್ರವಿಶನ್ತಿ ಯೋಽವಿದ್ಯಾಮುಪಾಸತೇ ।**
**ತತೋಭೂಯಇವತೇ ತಮೋಯ ಉ ವಿದ್ಯಾಯಾಂರತಾಃ ॥**

ಅವಿದ್ಯೆಯನ್ನು ಉಪಾಸಿಸುವವರು ಕುರುಡುಗೊಳಿಸುವ ಕತ್ತಲೆಯನ್ನು ಪ್ರವೇಶಿಸುತ್ತಾರೆ, ವಿದ್ಯೆಯಲ್ಲಿ ಆನಂದವನ್ನು ಪಡೆಯುವವರು ಅದಕ್ಕಿಂತಲೂ ಹೆಚ್ಚಿನ ಕತ್ತಲನ್ನು ಪ್ರವೇಶಿಸುತ್ತಾರೆ.

**ಅನ್ಯದೇವಾಹುರ್ವಿದ್ಯಯಾ ಅನ್ಯದೇವಾಹುರವಿದ್ಯಯಾ ।**
**ಇತಿಶುಶ್ರುಮ ಧೀರಾಣಾಂ ಯೇ ನಸ್ತದ್ವ್ಯಾಚಚಕ್ಷಿರೇ ॥**

ವಿದ್ಯೆಯಿಂದ ಒಂದು ಫಲ ದೊರಕುತ್ತದೆ ಎನ್ನುತ್ತಾರೆ. ಅವಿದ್ಯೆಯಿಂದ ಮತ್ತೊಂದು ಫಲ ದೊರಕುತ್ತದೆನ್ನುತ್ತಾರೆ. ನಮಗೆ ಇದನ್ನು ವಿವರಿಸಿದ ಪ್ರಾಜ್ಞರಿಂದ ಹೀಗೆ ನಾವು ಕೇಳಿರುತ್ತೇವೆ.

**ವಿದ್ಯಾಂಚಾಽವಿದ್ಯಾಂಚ ಯಸ್ತದ್ವೇದೋಭಯಂ ಸಹ ।**
**ಅವಿದ್ಯಯಾಮೃತ್ಯುಂತೀರ್ತ್ವಾ ವಿದ್ಯಯಾಮೃತಮಶ್ನುತೇ ॥**

ವಿದ್ಯೆ ಮತ್ತು ಅವಿದ್ಯೆ ಇವೆರಡನ್ನೂ ಬಲ್ಲವನು ಅವಿದ್ಯೆಯಿಂದ ಮೃತ್ಯುವನ್ನು ದಾಟಿ ವಿದ್ಯೆಯಿಂದ ಅಮೃತತ್ವದ ಅನುಭವವನ್ನು ಪಡೆಯು ತ್ತಾನೆ.

**ಅನ್ಧಂತಮಃ ಪ್ರವಿಶನ್ತಿಯೇ ಸಂಭೂತಿಮುಪಾಸತೇ ।**
**ತತೋಭೂಯ ಇವತೇತನೋಯ ಉ ಸಂಭೂತ್ಯಾಂರತಾಃ ॥**

ಅವಿದ್ಯೆಯನ್ನು ಉಪಾಸಿಸುವವರು ಕುರುಡುಗೊಳಿಸುವ ಕತ್ತಲನ್ನು ಪ್ರವೇಶಿಸುತ್ತಾರೆ. ವಿದ್ಯೆಯಲ್ಲಿ ರಮಿಸುವವರು ಇನ್ನೂ ಹೆಚ್ಚಿನ ಕತ್ತಲನ್ನು ಪ್ರವೇಶಿಸುತ್ತಾರೆ ಎನ್ನುವಂತಿದೆ.

**ಅನ್ಯದೇವಾಹುಸ್ಸಂಭವಾದನ್ಯದಾಹುರಸಂಭವಾತ್ ।**
**ಇತಿಶುಶ್ರುಮ ಧೀರಾಣಾಂ ಯೇನಸ್ತದ್ವ್ಯಾಚಚಕ್ಷಿರೇ ॥**

ಶುದ್ಧ ಇರುವು ಒಂದು ಫಲವನ್ನು ನೀಡುತ್ತದೆ. ಅಗಲುವಿಕೆಯು ಬೇರೊಂದು ಫಲವನ್ನು ನೀಡುತ್ತದೆ. ನಮಗೆ ಅದನ್ನು ಬೋಧಿಸಿದ ಜ್ಞಾನಿ ಗಳಿಂದ ನಾವು ಹಾಗೆ ಕೇಳಿರುತ್ತೇವೆ.

**ಸಂಭೂತಿಂಚ ವಿನಾಶಂಚ ಯಸ್ತದ್ವೇದೋಭಯಂಸಹ ।**
**ವಿನಾಶೇನ ಮೃತ್ಯುಂತೀರ್ತ್ವಾ ಸಂಭೂತ್ಯಾಮೃತಮಶ್ನುತೇ ॥**

ಬ್ರಹ್ಮವನ್ನು ಬಲ್ಲವನೂ ಮತ್ತು ವಿನಾಶವನ್ನು ಬಲ್ಲವನೂ ಇಬ್ಬರೂ ಒಟ್ಟಿಗೆ ವಿನಾಶದ ಮೂಲಕ ಮೃತ್ಯುವನ್ನು ದಾಟಿ ಸಂಭೂತಿಯ ಮೂಲಕ ಅಮೃತತ್ವವನ್ನು ಸಾಧಿಸುತ್ತಾರೆ.

**ಹಿರಣ್ಮಯೇನಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ ।**
**ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯದೃಷ್ಟಯೇ ॥**

ಸತ್ಯದ ಮುಖವು ಹೊಳೆಯುತ್ತಿರುವ ಭಂಗಾರದ ಮುಚ್ಚಳದಿಂದ ಮುಚ್ಚಲ್ಪಟ್ಟಿದೆ. ಓ ಸತ್ಯಪುರುಷನೇ ಆ ಮುಚ್ಚಳವನ್ನು ನೀನೇ ತೆಗೆದು ಸತ್ಯ ಮತ್ತು ಧರ್ಮದ ಜ್ಯೋತಿಯನ್ನು ನಮಗೆ ತೋರಿಸು.

**ಪೂಷನ್ನೇಕರ್ಷೇ ಯಮಸೂರ್ಯ ಪ್ರಾಜಾಪತ್ಯವ್ಯೂಹರಶ್ಮೀನ್ ಸಮೂಹತೇಜಃ ।**
**ಯತ್ತೇರೂಪಂ ಕಲ್ಯಾಣತಮಂ ತತ್ತೇಪಶ್ಯಾಮಿಯೋऽಸಾವಸೌ ಪುರುಷಸ್ಸೋऽಹಮಸ್ಮಿ ॥**

ಆಕಾಶದಲ್ಲಿ ಏಕಾಂಗಿಯಾಗಿ ಸಂಚರಿಸುವ ಸೂರ್ಯನೇ ಎಲ್ಲವನ್ನೂ ನಿಯಂತ್ರಣಗೊಳಿಸುವ ಯಮನೇ, ಸೌರವ್ಯೂಹದ ಅತ್ಯಂತ ಸೂಕ್ಷ್ಮವೂ ಆದ ನಿನ್ನ ಕಿರಣಗಳನ್ನು ಸರಿಸು. ನಿನ್ನ ಪ್ರಭೆಯನ್ನು ಒಂದುಗೂಡಿಸಿಕೋ. ನಿನ್ನ ನಿಜವಾದ ಅತ್ಯಂತ ಮಂಗಳಕರವಾದ ತೇಜಸ್ಸನ್ನು ನಾನು ನೋಡ ಬಯಸುತ್ತೇನೆ.

**ವಾಯುರನಿಲಮಮೃತ ಮಥೇದಂ ಭಸ್ಮಾಂತಂ ಶರೀರಂ ।**
**ಓಂಕ್ರತೋಸ್ಮರಕೃತಂಸ್ಮರ, ಕ್ರತೋಸ್ಮರಕೃತಂಸ್ಮರ ॥**

ನನ್ನಲ್ಲಿರುವ ಮುಖ್ಯ ಶಕ್ತಿಗಳು ಅಮೃತವಾದ ಪ್ರಾಣದಲ್ಲಿ ಮತ್ತು ವಿಶ್ವಶಕ್ತಿಯಲ್ಲಿ ಇನ್ನೇನು ಲೀನವಾಗಲಿವೆ. ಆಗ ಈ ಮರ್ತ್ಯದೇಹವು ಬೂದಿಯಾಗುತ್ತದೆ. ಓಂ ಓ ಮನಸೇ ನೆನಪಿರಲಿ, ನಿನ್ನ ಒಳ್ಳೆಯ ಕರ್ಮಗಳು ನೆನಪಿನಲ್ಲಿರಲಿ, ನಿನ್ನ ಒಳ್ಳೆಯ ಕರ್ಮಗಳು ನೆನಪಿನಲ್ಲಿರಲಿ.

**ಅಗ್ನೇನಯಸುಪಥಾರಾಯೇ ಅಸ್ಮಾನ್ ವಿಶ್ವಾನಿದೇವ ವಯುನಾನಿ ವಿದ್ವಾನ್ ।**
**ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂತೇ ನಮ ಉಕ್ತಿಂ ವಿಧೇಮ ॥**

ಓ ಅಗ್ನಿಯೇ ನಮ್ಮ ಸತ್ಕರ್ಮಫಲಗಳಾದ ಐಶ್ವರ್ಯವನ್ನು ಅನುಭವಿಸಲು ನಮ್ಮನ್ನು ಒಳ್ಳೆಯ ದಾರಿಯಲ್ಲಿ ನಡೆಸು. ನಮ್ಮ ಎಲ್ಲ ಕರ್ಮಗಳನ್ನೂ ನೀನು ಬಲ್ಲೆ. ಮೋಸದಿಂದ ಕೂಡಿದ ಪಾಪವನ್ನು ನಾಶಮಾಡು. ಮಾತುಗಳಿಂದ ನಾವು ಮತ್ತೆ ಮತ್ತೆ ನಿನ್ನನ್ನು ನಮಸ್ಕರಿಸುತ್ತೇವೆ.

ಈಶಾವಾಸ್ಯೋಪನಿಷತ್ ಸಮಾಪ್ತಂ.

# ಕೇನೋಪನಿಷತ್

ಪ್ರಥಮಖಂಡಃ

**ಕೇನೇಷಿತಂ ಪತತಿಪ್ರೇಷಿತಂ ಮನಃ ಕೇನಪ್ರಾಣಃಪ್ರಥಮಃ**
**ಪ್ರೈತಿಯುಕ್ತಃ ।**
**ಕೇನೇಷಿತಾಂವಾಚಮಿಮಾಂ ವದಂತಿ ಚಕ್ಷುಶ್ಶ್ರೋತ್ರಂ ಕ ಉ**
**ದೇವೋಯುನಕ್ತಿ ॥**

ಯಾರ ಆಜ್ಞೆಗೆ ಒಳಪಟ್ಟು ಮನಸ್ಸು ಅದರ ಗುರಿಯನ್ನು ಮುಟ್ಟುತ್ತದ? ಯಾರಿಂದ ಹೂಡಲ್ಪಟ್ಟ ಪ್ರಾಣವು ಅದರ ಮಾರ್ಗದಲ್ಲಿ ಮಾತ್ರ ಚಲಿಸಲ್ಪಡುತ್ತಿದೆ? ಯಾರಿಂದ ಪ್ರಚೋದಿಸಲ್ಪಟ್ಟು ಮಾನವರು ಮಾತನಾಡುತ್ತಾರೆ? ಯಾವ ದೇವರು ಕಣ್ಣು ಮತ್ತು ಕಿವಿಗಳಿಗೆ ಅವುಗಳ ಕೆಲಸವನ್ನು ತಿಳಿಸುವನು?

**ಶ್ರೋತ್ರಸ್ಯಶ್ರೋತ್ರಂ ಮನಸೋಮನೋ ಯದ್ವಾಚೋಹ**
**ವಾಚಂ ಸ ಉ ಪ್ರಾಣಸ್ಯಪ್ರಾಣಃ ।**
**ಚಕ್ಷುಷಶ್ಚಕ್ಷುರತಿಮುಚ್ಯಧೀರಾಃ ಪ್ರೇತ್ಯಾಸ್ಮಾಲ್ಲೋಕಾದಮೃತಾ**
**ಭವನ್ತಿ ॥**

ಅದು ಕಿವಿಯಕಿವಿ, ಮನಸ್ಸಿನಮನಸ್ಸು, ಮಾತಿನಮಾತು, ಪ್ರಾಣದ ಪ್ರಾಣ. ಆದ್ದರಿಂದ ವಿವೇಕಿಗಳು ಆತ್ಮನನ್ನು ಈ ಇಂದ್ರಿಯಗಳ ಕ್ರಿಯೆಯಿಂದ ಬೇರ್ಪಡಿಸಿ, ಇಂದ್ರಿಯ ಜೀವನದಿಂದ ಮೇಲೆದ್ದು ಅಮೃತತ್ವವನ್ನು ಪಡೆದು ಕೊಳ್ಳುತ್ತಾರೆ.

**ನತತ್ರ ಚಕ್ಷುರ್ಗಚ್ಛತಿ ನ ವಾಗ್ಗಚ್ಛತಿನೋಮನಃ ।**
**ನವಿದ್ಮೋವಿಜಾನೀಮೋನಯಥೈತದನುಶಿಷ್ಯಾತ್ ॥**
**ಅನ್ಯದೇವತತ್ ವಿದಿತಾತ್ ಅಥೋ ಅವಿದಿತಾತ್ ಅಧಿ ।**
**ಇತಿ ಶುಶ್ರುಮಪೂರ್ವೇಷಾಂ ಯೇನಃತತ್ವ್ಯಾಚಚಕ್ಷಿರೇ ॥**

ಅಲ್ಲಿಗೆ ಕಣ್ಣು ಹೋಗುವುದಿಲ್ಲ, ವಾಕ್ಕು ಹೋಗುವುದಿಲ್ಲ, ಮನಸ್ಸು ಹೋಗುವುದಿಲ್ಲ. ಬ್ರಹ್ಮನು ಹೇಗಿರುವನೆಂದು ನಾವು ಅರಿಯೆವು. ಇದನ್ನು ಹೇಗೆ ತಿಳಿಸಿಕೊಡಬೇಕೋ ಅದನ್ನು ಅರಿಯೆವು. ಆ ಬ್ರಹ್ಮವು ತಿಳಿದಿರುವುದಕ್ಕಿಂತ ಬೇರೆ ಮತ್ತು ತಿಳಿಯದಿರುವುದಕ್ಕಿಂತ ಬೇರೆ ; ಯಾರು ನಮಗೆ ಅದನ್ನು ವಿವರಿಸಿದರೋ ಅಂತಹ ಪೂರ್ವಾಚಾರ್ಯರಿಂದ ಹೀಗೆ ಕೇಳಿದ್ದೇವೆ.

**ಯದ್ವಾಚಾಽನಭ್ಯುದಿತಂ ಯೇನ ವಾಗಭ್ಯುದ್ಯತೇ ।**
**ತದೇವಬ್ರಹ್ಮತ್ವಂ ವಿದ್ಧಿ ನೇದಂ ಯದಿದಂ ಉಪಾಸತೇ ॥**

ಯಾವುದು ವಾಕ್ಕಿನಿಂದ ವ್ಯಕ್ತವಾಗುವುದಿಲ್ಲವೋ ಯಾವುದರಿಂದ ವಾಕ್ಕು ವ್ಯಕ್ತವಾಗುವುದೋ ಅದನ್ನೇ ನೀನು ಬ್ರಹ್ಮವೆಂದು ತಿಳಿ ; ಯಾವುದನ್ನು ' ಇದು ' ಎಂದು ಜನರು ಉಪಾಸನೆಮಾಡುತ್ತಾರೋ ಅದಲ್ಲ.

**ಯನ್ಮನಸಾನಮನುತೇ ಯೇನಾಹುರ್ಮನೋಮತಂ ।**
**ತದೇವಬ್ರಹ್ಮತ್ವಂ ವಿದ್ಧಿ ನೇದಂ ಯದಿದಂ ಉಪಾಸತೇ ॥**

ಯಾವುದನ್ನು ಮನಸ್ಸಿನಿಂದ ಮನನಮಾಡಲು ಆಗುವುದಿಲ್ಲವೋ, ಯಾವುದರಿಂದ ಮನಸ್ಸು ಮನನಮಾಡಲ್ಪಟ್ಟಿದೆ ಎಂದು ಹೇಳುವರೋ ಅದನ್ನೇ ನೀನು ಬ್ರಹ್ಮವೆಂದು ತಿಳಿ. ಯಾವುವನ್ನು ' ಇದು ' ಎಂದು ಜನರು ಉಪಾಸನೆಮಾಡುತ್ತಾರೆಯೋ ಅದಲ್ಲ.

**ಯಚ್ಚಕ್ಷುಷಾ ನ ಪಶ್ಯತಿ ಯೇನಚಕ್ಷೂಂಷಿ ಪಶ್ಯತಿ ।**
**ತದೇವಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**

ಯಾವುದನ್ನು ಕಣ್ಣಿನಿಂದ ನೋಡುವುದಿಲ್ಲವೋ, ಯಾವುದರಿಂದ ಕಣ್ಣುಗಳನ್ನು ನೋಡುತ್ತೇವೆಯೋ ಅದನ್ನೇ ನೀನು ಬ್ರಹ್ಮವೆಂದು ತಿಳಿ. ಯಾವುದನ್ನು ' ಇದು ' ಎಂದು ಜನರು ಉಪಾಸನೆಮಾಡುತ್ತಾರೋ ಅದಲ್ಲ.

**ಯಚ್ಛ್ರೋತ್ರೇಣ ನಶೃಣೋತಿ ಯೇನಶ್ರೋತ್ರಂ ಇದಂಶೃತಂ ।**
**ತದೇವಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**

ಯಾವುದನ್ನು ಕಿವಿಯಿಂದ ಕೇಳುವುದಿಲ್ಲವೋ ಯಾವುದರಿಂದ ಕಿವಿಯು ಕೇಳಲ್ಪಡುವುದೋ ಅದನ್ನೇ ನೀನು ಬ್ರಹ್ಮವೆಂದು ತಿಳಿ. ಯಾವುದನ್ನು 'ಇದು' ಎಂದು ಜನರು ಉಪಾಸನೆಮಾಡುತ್ತಾರೋ ಅದಲ್ಲ.

**ಯತ್ಪ್ರಾಣೇನ ನ ಪ್ರಾಣಿತಿ ಯೇನಪ್ರಾಣಃ ಪ್ರಣೀಯತೇ ।**
**ತದೇವಬ್ರಹ್ಮತ್ವಂ ವಿದ್ಧಿ ನೇದಂ ಯದಿದಮುಪಾಸತೇ ॥**

ಯಾವುದನ್ನು ಘ್ರಾಣಶಕ್ತಿಯಿಂದ ವ್ಯಕ್ತಪಡಿಸಲು ಸಾಧ್ಯವಿಲ್ಲವೋ ಆದರೆ ಯಾವುದು ಘ್ರಾಣವನ್ನು ವ್ಯಕ್ತಪಡಿಸುವುದೋ ಅದನ್ನೇ ನೀನ ಬ್ರಹ್ಮವೆಂದು ತಿಳಿ. ಯಾವುದನ್ನು 'ಇದು' ಎಂದು ಜನರು ಉಪಾಸ ಮಾಡುತ್ತಾರೋ ಅದಲ್ಲ.

ದ್ವಿತೀಯಖಂಡಃ

**ಯದಿಮನ್ಯಸೇಸುವೇದೇತಿದಭ್ರಮೇವಾಪಿ ನೂನಂತ್ವಂ ವೇತ್ಥ ಬ್ರಹ್ಮಣೋರೂಪಂ ।**
**ಯದಸ್ಯ ತ್ವಂ ಯದಸ್ಯದೇವೇಷ್ವಥನುಮೀಮಾಂಸ್ಯಮೇವತೇ ಮನ್ಯೇವಿದಿತಂ ॥**

ನೀನು ಬ್ರಹ್ಮವನ್ನು ಚೆನ್ನಾಗಿ ತಿಳಿದಿರುವುದಾಗಿ ಭಾವಿಸಿದ್ದರೆ, ನೀನ ತಿಳಿದಿರುವುದು ಸ್ವಲ್ಪವೇ. ಏಕೆಂದರೆ ಜೀವಿಗಳಾಗಿ ಅಥವಾ ದೇವತೆಗಳಾ ತೋರುತ್ತಿರುವ ಈ ರೂಪಗಳು ಉಪಾಧಿಯಿಂದ ಕೂಡಿದ ಬ್ರಹ್ಮದ ರೂಪ ಹೀಗಾಗಿ ಅದು ಅಲ್ಪ. ಆದ್ದರಿಂದ ಬ್ರಹ್ಮವನ್ನು ಕುರಿತು ನೀನು ಇನ್ನೂ ಹೆಚ್ಚು ವಿಚಾರಮಾಡಬೇಕಾಗುತ್ತದೆ.

**ನಾಹಂಮನ್ಯೇ ಸುವೇದೇತಿ, ನೋನವೇದೇತಿವೇದಚ ।**
**ಯೋನಃತದ್ವೇದನೋ ನವೇದೇತಿ ವೇದಚ ॥**

ನಾನು ಚೆನ್ನಾಗಿ ತಿಳಿದಿದ್ದೇನೆ ಎಂದು ಭಾವಿಸುವುದಿಲ್ಲ, ಅದು ನನ ತಿಳಿದಿಲ್ಲ ಎಂದೂ ಭಾವಿಸುವುದಿಲ್ಲ, ಅದು ತಿಳಿದಿಲ್ಲದ್ದು ಮತ್ತು ತಿಳಿದಿ

ವುದು ಇವೆರಡಕ್ಕಿಂತ ಬೇರೆ ಎಂಬುದನ್ನು ನಮ್ಮಲ್ಲಿ ಯಾವನು ಅರಿತಿದ್ದಾನೋ ಅವನು ಮಾತ್ರ ಅದನ್ನು ಬಲ್ಲವನು.

**ಯಸ್ಯಾಮತಂತಸ್ಯಮತಂ ಮತಂಯಸ್ಯನವೇದಸಃ ।**
**ಅವಿಜ್ಞಾತಂವಿಜಾನತಾಂ ವಿಜ್ಞಾತಂ ಅವಿಜಾನತಾಂ ॥**

ಅದನ್ನು ತಿಳಿದವನಿಗೆ ಅದು ತಿಳಿಯದು, ಯಾರಿಗೆ ಅದು ತಿಳಿದಿಲ್ಲವೋ ಅವನಿಗೆ ಅದು ತಿಳದಿದೆ, ನಿಜವಾದ ಜ್ಞಾನಿಗೆ ಅದು "ತಿಳಿಯದೇ ಇರ ತಕ್ಕದ್ದು." ಅಜ್ಞಾನಿಗಾದರೋ ಅದು ತಿಳಿದಿರುವುದು.

**ಪ್ರತಿಬೋಧವಿದಿತಂ ಮತಂ ಅಮೃತತ್ವಂ ಹಿ ವಿಂದತೇ ।**
**ಆತ್ಮನಾವಿಂದತೇ ವೀರ್ಯಂ ವಿದ್ಯಯಾವಿನ್ದತೇ ಅಮೃತಂ ॥**

ಯಾರು ಪ್ರತಿಯೊಂದು ಜ್ಞಾನ ಜಾಗೃತಿಗಳ ಮಿಡಿತದಲ್ಲಿಯೂ ಬ್ರಹ್ಮ ವನ್ನು ತಿಳಿಯುತ್ತಾನೆಯೋ ಅವನು ಅಮೃತತ್ವವನ್ನು ಪಡೆಯುತ್ತಾನೆ. ಆತ್ಮನಿಂದ ಆತ ವೀರ್ಯವನ್ನು ಪಡೆಯುತ್ತಾನೆ. ಆತ್ಮ ವಿಷಯವಾದ ವಿದ್ಯೆ ಯಿಂದ ಅಮೃತತ್ವವನ್ನು ಪಡೆಯುತ್ತಾನೆ.

**ಇಹಚೇದವೇದೀದಥ ಸತ್ಯಮಸ್ತಿ । ನಚೇದಿಹಾವೇದೀನ್ಮಹತೀ ವ್ಯನಷ್ಟಿಃ ।**
**ಭೂತೇಷು ಭೂತೇಷು ವಿಚಿತ್ಯಧೀರಾಃ । ಪ್ರೇತ್ಯಾಸ್ಮಾಲ್ಲೋಕಾ ದಮೃತಾಭವನ್ತಿ ॥**

ಮಾನವರ ಶಿಕ್ಷಣದ ಪರಾಕಾಷ್ಠೆ ಇಲ್ಲೇ ಈಗಲೇ ಸಾಕ್ಷಾತ್ಕಾರಮಾಡಿ ಕೊಳ್ಳುವುದು ಎನ್ನುವಂತಿದೆ, ಇದು ಒಂದು ಭ್ರಮೆ ಎಂದರಿತು ಮುಂದು ವರಿಯಲು ನಿರಾಕರಿಸಿದರೆ ಅವನಿಗಾಗುವ ನಷ್ಟ ಮಹತ್‌ಪ್ರಮಾಣದ್ದು. ಜ್ಞಾನಿಗಳು ಸಕಲ ಚರಾಚರ ಸೃಷ್ಟಿಯಲ್ಲೂ ಬ್ರಹ್ಮನನ್ನೇ ಕಾಣುತ್ತಾರೆ. ಅಂತಹವರು ಈ ಲೋಕದಿಂದ ಕಣ್ಮರೆಯಾದಾಗ ಅಮೃತತ್ವವನ್ನು ಪಡೆಯುತ್ತಾರೆ.

ತೃತೀಯಃ ಖಂಡಃ

**ಬ್ರಹ್ಮ ಹ ದೇವೇಭ್ಯೋ ವಿಜಿಗ್ಯೇ ; ತಸ್ಯ ಹ ಬ್ರಹ್ಮಣೋ ವಿಜಯೇ ದೇವಾ ಅಮಹೀಯಂತ।**
**ತ ಐಕ್ಷಂತಾಸ್ಮಾಕಮೇವಾಯಂ ವಿಜಯೋऽಸ್ಮಾಕಮೇವಾಯಂ ಮಹಿಮೇತಿ ॥**

ದೇವತೆಗಳಿಗೆ ಬ್ರಹ್ಮವು ಜಯವನ್ನು ಗಳಿಸಿಕೊಟ್ಟಿತು. ಬ್ರಹ್ಮದಿಂದ ಜಯವು ದೊರೆತಿದ್ದರೂ ಆದರಿಂದ ಉಬ್ಬಿದ ದೇವತೆಗಳು " ಈ ವಿಜಯವು ನಮ್ಮದೇ, ಈ ಮಹಿಮೆಯೂ ನಮ್ಮವೇ " ಹೀಗೆ ಭಾವಿಸಿದರು.

**ತದ್ಧೈಷಾಂ ವಿಜಜ್ಞೌ ; ತೇಭ್ಯೋ ಹ ಪ್ರಾದುರ್ಬಭೂವ ।**
**ತನ್ನ ವ್ಯಜಾನತ ಕಿಮಿದಂ ಯಕ್ಷಮಿತಿ ॥**

ಬ್ರಹ್ಮವು ಇವರ ತಪ್ಪು ಭಾವನೆಯನ್ನು ಮತ್ತು ಅಹಂಕಾರವನ್ನು ತಿಳಿದುಕೊಂಡಿತು. ಅವರ ಮುಂದೆ ಕಾಣಿಸಿಕೊಂಡಿತು. ಆ ಯಕ್ಷವು ಯಾರು ಎಂಬುದು ಅವರಿಗೆ ತಿಳಿಯಲಿಲ್ಲ.

**ತೇऽಗ್ನಿಮಬ್ರುವನ್ ಜಾತವೇದ, ಏತದ್ವಿಜಾನೀಹಿ**
**ಕಿಮೇತದ್ಯಕ್ಷಮಿತಿ, ತಥೇತಿ ॥**

ಅವರು ಅಗ್ನಿಯನ್ನು ಕುರಿತು ಹೇಳಿದರು " ಹೇ ಜಾತವೇದ, ಈ ಯಕ್ಷವು ಯಾವುದೆಂಬುದನ್ನು ತಿಳಿ ?" ಹಾಗೆಯೇ ಆಗಲಿ ಎಂದು ಅಗ್ನಿಯು ಹೇಳಿ ತನಗೆ ವಿಧಿಸಿದ ಕೆಲಸಕ್ಕಾಗಿ ಆತನು ಹೊರಟನು.

**ತದಭ್ಯದ್ರವತ್ ತಮಭ್ಯವದತ್ ಕೋऽಸೀತಿ, ಅಗ್ನಿರ್ವಾ**
**ಅಹಮಸ್ಮಿ ಇತ್ಯಬ್ರವೀತ್, ಜಾತವೇದಾ ವಾ ಅಹಮಸ್ಮೀತಿ ॥**

ಅಗ್ನಿಯು ಅದರ ಸಮೀಪಕ್ಕೆ ಓಡಿದನು " ನೀನು ಯಾರು " ಎಂದು ಅಗ್ನಿಯನ್ನು ಯಕ್ಷವು ಪ್ರಶ್ನಿಸಿತು. " ನಾನು ಜಾತವೇದನಾಗಿದ್ದೇನೆ. ಸಾಕ್ಷಾತ್ ಅಗ್ನಿಯಾಗಿದ್ದೇನೆ" ಎಂದು ಉತ್ತರವನ್ನು ನೀಡಿದನು.

**ತಸ್ಮಿನ್ ತ್ವಯಿ ಕಿಂ ವೀರ್ಯಂ ಇತಿ, ಅಪಿ ಇದಂ ಸರ್ವಂ ದಹೇಯಂ ಯದಿದಂ ಪೃಥಿವ್ಯಾಂ ಇತಿ ||**

"ಅಂತಹ ಪ್ರಖ್ಯಾತವಾದ ಯಾವ ವೀರ್ಯವು ನಿನ್ನಲ್ಲುಂಟು ?" ಎಂದು ಯಕ್ಷನು ಕೇಳಿದನು ಈ ಭೂಮಿಯಲ್ಲಿ ಏನೇನಿದೆಯೋ ಅವೆಲ್ಲವನ್ನೂ ನಾನು ಸುಡಬಲ್ಲೆನು ಎಂದು ಅಗ್ನಿಯು ಉತ್ತರ ಕೊಟ್ಟನು.

**ತಸ್ಮೈ ತೃಣಂ ನಿದಧೌ ಏತತ್ ದಹೇತಿ, ತದುಪಪ್ರೇಯಾಯ ಸರ್ವಜವೇನ; ತನ್ನ ಶಶಾಕದಗ್ಧುಂ, ಸತತ್ ಏವ ನಿವವೃತೇ, ನೈತದಶಕಂ ವಿಜ್ಞಾತುಂ ಯದೇತದ್ಯಕ್ಷಮಿತಿ ||**

'ಇದನ್ನು ಸುಡು' ಎಂದು ಅವನ ಎದುರಿಗೆ ಒಂದು ಹುಲ್ಲುಕಡ್ಡಿಯನ್ನು ಯಕ್ಷವು ಇಟ್ಟಿತು. ಅಗ್ನಿಯು ಸರ್ವವೇಗದಿಂದಲೂ ಅದರ ಬಳಿಗೆ ಓಡಿದನು, ಅದನ್ನು ಸುಡಲು ಶಕ್ತನಾಗಲಿಲ್ಲ. ಅವನು ಅಲ್ಲಿಂದಲೇ ಹಿಂತಿರುಗಿದನು. ಇದು ಯಾವ ಯಕ್ಷವು ಎಂಬುದನ್ನು ನಾನು ತಿಳಿಯಲು ಶಕ್ತನಾಗಲಿಲ್ಲ ಎಂದು ದೇವತೆಗಳಿಗೆ ಹೇಳಿದನು.

**ಅಥವಾಯುಮಬ್ರುವನ್, ವಾಯವ ಏತತ್ ವಿಜಾನೀಹಿ ಕಿಂ ಏತತ್ ಯಕ್ಷಂ ಇತಿ ತಥೇತಿ ||**

ಅನಂತರ ವಾಯುವನ್ನು ಕುರಿತು ದೇವತೆಗಳು "ಹೇ ವಾಯು ಈ ಯಕ್ಷವು ಯಾರು ಎಂಬುದನ್ನು ತಿಳಿದುಕೊ" ಎಂದು ಹೇಳಲು ಹಾಗೆಯೇ ಆಗಲೆಂದು ವಾಯುವು ಹೇಳಿದನು,

**ತದಭ್ಯದ್ರವತ್ತಮಭ್ಯವದತ್ ಕೋಸೀತಿ ವಾಯುರ್ವಾ ಅಹಮಸ್ಮೀತ್ಯಬ್ರವೀನ್ಮಾತರಿಶ್ವಾವಾ ಅಹಮಸ್ಮೀತಿ ||**

ವಾಯುವು ಅದರ ಸಮೀಪಕ್ಕೆ ಓಡಿದನು "ನೀನು ಯಾರು" ಎಂದು ಅವನನ್ನು ಯಕ್ಷವು ಪ್ರಶ್ನಿಸಿತು "ನಾನು ವಾಯುವೇ ಆಗಿರುವೆನು ಮಾತರಿಶ್ವನೇ ಆಗಿರುವೆನು" ಎಂದು ಹೇಳಿದನು.

**ತಸ್ಮಿಂಸ್ತ್ವಯಿ ಕಿಂವೀರ್ಯಮಿತ್ಯಪೀದಂ ।**
**ಸರ್ವಮಾದದೀಯ ಯದಿದಂ ಪೃಥಿವ್ಯಾಮಿತಿ ॥**

"ನಿನ್ನಲ್ಲಿ ಅಂತಹ ಯಾವ ವೀರ್ಯ ಉಂಟು" ಎಂದು ಯಕ್ಷ ಪ್ರಶ್ನಿಸಲು ವಾಯುವು "ಈ ಭೂಮಿಯಲ್ಲಿ ಏನೇನಿದೆಯೋ ಅವೆಲ್ಲವನ್ನೂ ಎತ್ತಬಲ್ಲೆನು" ಎಂದು ಹೇಳಿದನು.

**ತಸ್ಮೈ ತೃಣಂ ನಿದಧೌ, ಏತತ್ ಅಧತ್ಸ್ವೇತಿತದುಪಪ್ರೇಯಾಯ ಸರ್ವಜವೇನ । ತನ್ನಶಶಾಕ ಆದಾತುಂ ಸತತ್ ಏವ ನಿವವೃತೇ ನೈತದಶಕಂ ವಿಜ್ಞಾತುಂಯದೇತತ್‌ಯಕ್ಷಮಿತಿ ॥**

ಆಗ ಯಕ್ಷವು ಒಂದು ಹುಲ್ಲುಕಡ್ಡಿಯನ್ನಿಟ್ಟು "ಇದನ್ನು ಎತ್ತು" ಎಂದು ಹೇಳಿತು. ಆಗ ವಾಯುವು ತನ್ನ ಸರ್ವವೇಗದಿಂದ ಅದರ ಬಳಿಗೆ ಓಡಿದನು. ಆದರೂ ಅದನ್ನು ಎತ್ತಲೂ ಶಕ್ತನಾಗಲಿಲ್ಲ. ಅವನು ಅಲ್ಲಿಂದಲೇ ಹಿಂತಿರುಗಿದನು. ಇದು ಯಾವ ಯಕ್ಷನು ಎಂದು ನನಗೆ ತಿಳಿದುಕೊಳ್ಳಲಾಗಲಿಲ್ಲ ಎಂದು ದೇವತೆಗಳಿಗೆ ಹೇಳಿದನು.

**ಅಥೇಂದ್ರಮಬ್ರುವನ್, ಮಘವನ್ನೇತತ್ ವಿಜಾನೀಹಿ, ಕಿಂ ಏತದ್ಯಕ್ಷಂ ಇತಿ ತಥೇತಿ, ತದಭ್ಯದ್ರವತ್, ತಸ್ಮಾತ್ತಿರೋದಧೇ ॥**

ಅನಂತರ ಅವರು ಇಂದ್ರನನ್ನು ಕುರಿತು "ಹೇ ಮಘವಂತನೇ ಈ ಯಕ್ಷವು ಯಾವುದೆಂಬುದನ್ನು ತಿಳಿದುಕೋ" ಎಂದು ಹೇಳಿದರು, ಇಂದ್ರನು "ಹಾಗೆಯೇ ಆಗಲಿ" ಎಂದು ಹೇಳಿ ಅದರ ಸಮೀಪಕ್ಕೆ ಹೋದನು. ಅದು ಅವನಿಂದ ಮರೆಯಾಯಿತು.

**ಸತಸ್ಮಿನ್ನೇವ ಆಕಾಶೇ ಸ್ತ್ರಿಯಮಾಜಗಾಮ ಬಹುಶೋಭಮಾನಾ ಮುಮಾಂ ।**
**ಹೈಮವತೀಂ, ತಾಂ ಹೋವಾಚ, ಕಿಮೇತದ್ಯಕ್ಷಮಿತಿ ॥**

ಅದಕ್ಕೆ ಬದಲಾಗಿ ಆ ಸ್ಥಳದಲ್ಲಿ ಇಂದ್ರನು ಬಹು ಶೋಭೆಯುಳ್ಳ ವಳೂ, ಹಿಮವಂತನ ಪುತ್ರಿಯೂ ಆದ ಉಮೆಯನ್ನು ಕಂಡನು. ಇಂದ್ರನು ಆಕೆಯನ್ನು ಕುರಿತು "ಈ ಯಕ್ಷವು ಯಾವುದು ?" ಎಂದು ಕೇಳಿದನು.

ಚತುರ್ಥಖಂಡಃ

**ಸಾಬ್ರಹ್ಮೇತಿ ಹೋವಾಚ, ಬ್ರಹ್ಮಣೋವಾ ಏತದ್ವಿಜಯೇ ।**
**ಮಹೀಯಧ್ವಮಿತಿ ತತೋಹೈವ ವಿದಾಂಚಕಾರ ಬ್ರಹ್ಮೇತಿ ॥**

ಆಗ ಉಮೆಯು ಹೇಳಿದಳು "ಎಲೈ ಇಂದ್ರನೇ ಅದು ಬ್ರಹ್ಮವು ; ಬ್ರಹ್ಮದ ಜಯದಲ್ಲೇ ನೀವು ಹೀಗೆ ಮಹಿಮೆಯನ್ನು ಹೊಂದಿದಿರಿ " ಅದರಿಂದಲೇ ಇಂದ್ರನು ಅದು ಬ್ರಹ್ಮವೆಂದು ತಿಳಿದುಕೊಂಡನು.

**ತಸ್ಮಾದ್ವಾ ಏತೇದೇವಾ ಅತಿತರಾಮಿವಾನ್ಯಾನ್ ದೇವಾನ್ ।**
**ಯದಗ್ನಿರ್ವಾಯುರಿಂದ್ರಸ್ತೇಹ್ಯೇನನ್ನೇದಿಷ್ಠಂ ಪಸ್ಪೃಶುಸ್ತೇ ।**
**ಹ್ಯೇನತ್ ಪ್ರಥಮೋ ವಿದಾಂಚಕಾರ ಬ್ರಹ್ಮೇತಿ ॥**

ಆದುದರಿಂದ ಅಗ್ನಿ, ವಾಯು, ಇಂದ್ರ ಎಂಬ ಈ ದೇವತೆಗಳು ಇತರ ದೇವತೆಗಳನ್ನು ಮೀರಿರುತ್ತಾರೆ. ಏಕೆಂದರೆ ಅವರು ಇದನ್ನು ಅತ್ಯಂತ ಹತ್ತಿರದಿಂದ ಮುಟ್ಟಿದರು ಮತ್ತು ಇದನ್ನು ಬ್ರಹ್ಮವೆಂದು ಮೊದಲನೆಯವರಾಗಿ ತಿಳಿದುಕೊಂಡರು,

**ತಸ್ಮಾದ್ವಾ ಇಂದ್ರೋಽತಿತರಾಮಿ ವಾನ್ಯಾನ್ ದೇವಾನ್, ಸಹ್ಯೇ ।**
**ನನ್ನೇದಿಷ್ಠಂ ಪಸ್ಪರ್ಶ ; ಸಹ್ಯೇನತ್ ಪ್ರಥಮೋ ವಿದಾಂಚಕಾರ ಬ್ರಹೇತಿ ॥**

ಅದರಲ್ಲೂ ಇಂದ್ರನು ಇತರ ದೇವತೆಗಳನ್ನು ಮೀರಿರುತ್ತಾನೆ. ಏಕೆಂದರೆ ಅವನು ಇದನ್ನು ಅತ್ಯಂತ ಹತ್ತಿರದಿಂದ ಮುಟ್ಟಿದನು ಮತ್ತು ಇದನ್ನು ಬ್ರಹ್ಮವೆಂದು ಮೊದಲನೆಯವನಾಗಿ ತಿಳಿದುಕೊಂಡನು,

**ತಸ್ಯೈಷ ಆದೇಶೋಯದೇತ ದ್ವಿದ್ಯುತೋವ್ಯದ್ಯುತದಾ ।**
**ಇತೀನ್ನ್ಯಮೀಮಿಷದಾ ಇತ್ಯಧಿದೈವತಂ ॥**

ಆ ಬ್ರಹ್ಮದ ವಿಷಯದಲ್ಲಿ ಈ ಉಪದೇಶ ಉಂಟು ; ಅದು ಮಿಂಚಿನ ಹೊಳಪಿನಂತೆ, ಕಣ್ಣು ಮಿಟುಕಿಸಿದಂತೆ, ಇದು ಅಧಿದೈವತದ ವಿಷಯ, ವಿಶ್ವ ಅಭಿವ್ಯಕ್ತಿಯ ಮುಖ.

**ಅಥಾಧ್ಯಾತ್ಮಂ ಯದೇತದ್ಗಚ್ಛತೀವಚಮನೋಽನೇನ ।**
**ಚೈತ ದುಪಸ್ಮರತ್ಯಭೀಕ್ಷ್ಣಂ ಸಂಕಲ್ಪಃ ॥**

ಈಗ ಅಧ್ಯಾತ್ಮವನ್ನು ಕುರಿತಂತೆ ಅದರ ವರ್ಣನೆ ; ಮನಸ್ಸು ಬ್ರಹ್ಮದ ಸಮೀಪಕ್ಕೆ ಶೀಘ್ರವಾಗಿಯೋ ಎಂಬಂತೆ ಹೋಗುತ್ತದೆ. ಸಾಧಕನು ಮನಸ್ಸಿನಿಂದ ಇದನ್ನು ಚೆನ್ನಾಗಿ ಸ್ಮರಿಸಿದಂತೆ, ಯಾವಾಗಲೂ ಬ್ರಹ್ಮವು ಹತ್ತಿರದಲ್ಲೇ ಇರುವಂತೆ ಕಲ್ಪಿಸಿಕೊಂಡಂತೆ ಇದೆ.

**ತದ್ಧ ತದ್ವನಂನಾಮ ; ತದ್ವನಮಿತ್ಯುಪಾಸಿತವ್ಯಂಸಯಏತದೇವಂ ।**
**ವೇದಾಭಿಹೈನಂ ಸರ್ವಾಣಿಭೂತಾನಿ ಸಂವಾಂಛನ್ತಿ ॥**

ಬ್ರಹ್ಮವು 'ತದ್ವನಂ' ಎಂಬ ಹೆಸರಿನಿಂದ ಪ್ರಖ್ಯಾತವಾಗಿದೆ. ಆದ್ದರಿಂದ ತದ್ವನಂ ಎಂದು ಅದನ್ನು ಭಾವಿಸಿ ಧ್ಯಾನಿಸಬೇಕು. ಆದ್ದರಿಂದ ಅದು ಅತ್ಯಂತ ಉಪಾಸನೀಯವಾದದ್ದು ಮತ್ತು ಆತ್ಯಂತ ಪೂಜನೀಯವಾದದ್ದು.

**ಉಪನಿಷದಂ ಭೋ ಬ್ರೂಹಿ ಇತಿ ಉಕ್ತಾತ ಉಪನಿಷತ್ ।**
**ಬ್ರಾಹ್ಮೀಂವಾವ ತ ಉಪನಿಷದಮಬ್ರೂವೇತಿ ॥**

"ಸ್ವಾಮಿ ಉಪನಿಷತ್ತನ್ನು ಬೋಧಿಸಿರಿ" ಎಂದು ಶಿಷ್ಯನು ಕೇಳುತ್ತಾನೆ. 'ನಿನಗೆ ಉಪನಿಷತ್ತು ಬೋಧಿಸಲ್ಪಟ್ಟಿತು. ಬ್ರಹ್ಮನಿಗೆ ಸಂಬಂಧಿಸಿದ ಉಪನಿಷತ್ತನ್ನೇ ನಿನಗೆ ಬೋಧಿಸಿದ್ದೇವೆ' ಎಂದು ಆಚಾರ್ಯರು ತಿಳಿಸುತ್ತಾರೆ.

**ತಸ್ಯೈತಪೋದಮಃ ಕರ್ಮೇತಿಪ್ರತಿಷ್ಠಾ ।**
**ವೇದಾಃ ಸರ್ವಾಂಗಾನಿ ; ಸತ್ಯಮಾಯತನಂ ॥**

ಅದಕ್ಕೆ ಎಂದರೆ ಉಪನಿಷತ್ತಿಗೆ ತಪಸ್ಸು, ಸಂಯಮ, ಕರ್ಮ ಇವೆಲ್ಲಾ ಪೋಷಕಗಳು ಹಾಗೆಯೇ ವೇದಗಳು ಅದರ ಅಂಗಗಳು, ಸತ್ಯವು ಅದರ ನೆಲೆ.

**ಯೋವಾ ಏತಾಂ ಏವಂ ವೇದ, ಅಪಹತ್ಯ ಪಾಪ್ಮಾನಂ ।**
**ಅನನ್ತೇ ಸ್ವರ್ಗೇ ಲೋಕೇಜ್ಯೇಯೇ ಪ್ರತಿತಿಷ್ಠತಿ ಪ್ರತಿತಿಷ್ಠತಿ ॥**

ಯಾರು ಹೀಗೆ ಬ್ರಹ್ಮಜ್ಞಾನವನ್ನು ಪಡೆಯುತ್ತಾರೆಯೋ ಅವರು ಪಾಪದಿಂದ ನಿವೃತ್ತರಾಗುತ್ತಾರೆ. ಅನಂತವೂ ಆನಂದಮಯವೂ, ಅತ್ಯುಚ್ಚವೂ ಆದ ಬ್ರಹ್ಮದಲ್ಲಿ ಚೆನ್ನಾಗಿ ಸ್ಥಾಪಿತರಾಗುತ್ತಾರೆ.

ಕೇನೋಪನಿಷತ್ ಸಮಾಪ್ತಃ.

# ಕಠೋಪನಿಷತ್

## ಅಧ್ಯಾಯ ೧ – ವಲ್ಲಿ ೧

**ಉಶನ್ ಹ ವೈ ವಾಜಶ್ರವಸಃ ಸರ್ವವೇದಸಂದದೌ ।**
**ತಸ್ಯಹ ನಚಿಕೇತಾನಾಮ ಪುತ್ರ ಆಸ ॥**

ವಿಶ್ವಜಿದ್ಯಾಗದಲ್ಲಿ ವಾಜಶ್ರವಸನು ಸ್ವರ್ಗಫಲಗಳ ಬಯಕೆಯುಳ್ಳವನಾಗಿ ತನ್ನ ಸರ್ವಸ್ವವೆಲ್ಲವನ್ನೂ ದಾನಮಾಡಿದನು. ಅವನಿಗೆ ನಚಿಕೇತನೆಂಬ ಒಬ್ಬ ಮಗನಿದ್ದನು.

**ತಂಹಕುಮಾರಂ ಸಂತಂ ದಕ್ಷಿಣಾಸುನೀಯಮಾನಾಸು ।**
**ಶ್ರದ್ಧಾऽऽವಿವೇಶ ಸೋऽಮನ್ಯತ ॥**

ಹಂಚಲು ದಾನವಸ್ತುಗಳನ್ನು ದೊರೆಯು ತರುತ್ತಿದ್ದಾಗ ನಚಿಕೇತನು ಇನ್ನೂ ಮಗುವಾಗಿದ್ದರೂ ಶ್ರದ್ಧೆಯಿಂದಲೂ ಸತ್ಯಭಾವನೆಯಿಂದಲೂ ತುಂಬಿದವನಾಗಿದ್ದನು. ಅವನು ತನ್ನಲ್ಲಿ ತಾನು ಯೋಚಿಸಿದ.

**ಪೀತೋದಕಾ ಜಗ್ಧತೃಣಾ ದುಗ್ಧದೋಹಾನಿರಿಂದ್ರಿಯಾಃ ।**
**ಅನಂದಾನಾಮ ತೇ ಲೋಕಾಸ್ತಾನ್ ಸಗಚ್ಛತಿ ತಾ ದದತ್ ॥**

ನೀರು ಕುಡಿಯುವುದು, ಹುಲ್ಲು ತಿನ್ನುವುದು, ಹಾಲು ಕೊಡುವುದು. ಕರು ಹಾಕುವುದು, ಇವೆಲ್ಲ ಮುಗಿದಿರುವ ಇಂತಹ ಹಸುಗಳನ್ನು ದಾನಮಾಡುವವನು ಸೇರುವ ಲೋಕಗಳು ವಾಸ್ತವವಾಗಿ ಆನಂದರಹಿತವಾಗಿರುತ್ತದೆ.

**ಸಹೋವಾಚಾಪಿತರಂ ತಾತ ಕಸ್ಮೈಮಾಂ ದಾಸ್ಯಸೀತಿ ।**
**ದ್ವಿತೀಯಂ ತೃತೀಯಂ ತಂಹೋವಾಚ, ಮೃತ್ಯವೇತ್ವಾದದಾಮೀತಿ॥**

ತಂದೆಯನ್ನು ಕುರಿತು ಅವನು ಹೇಳಿದ "ಅಪ್ಪಾ ನನ್ನನ್ನು ಯಾರಿಗೆ ದಾನ ಕೊಡುತ್ತೀಯೆ ?" ಇದನ್ನು ಅವನು ಎರಡನೆಯ ಸಲ, ಮೂರನೆಯ ಸಲ ಹೇಳಿದ. ಆಗ ತಂದೆಯು ಕೋಪಗೊಂಡವನಾಗಿ "ನಿನ್ನನ್ನು ನಾನು ಮೃತ್ಯುವಿಗೆ ಕೊಡುತ್ತೇನೆ" ಎಂದು ಹೇಳಿದನು.

**ಬಹೂನಾಮೇಮಿ ಪ್ರಥಮೋ ಬಹುನಾಮೇಮಿ ಮಧ್ಯಮಃ ।**
**ಕಿಂಸ್ವಿತ್‌ಯಮಸ್ಯಕರ್ತವ್ಯಂ ಯನ್ಮಯಾದ್ಯಕರಿಷ್ಯತಿ ॥**

"ಅನೇಕ ಮಕ್ಕಳಲ್ಲಿ ನಾನು ಪ್ರಥಮನಾಗಿದ್ದೇನೆ. ಮತ್ತೆ ಅನೇಕರಲ್ಲಿ ಮಧ್ಯಮನೂ ಆಗಿದ್ದೇನೆ. ಆದ್ದರಿಂದ ನನ್ನನ್ನು ತಂದೆಯು ಯಮನಿಗೆ ಕೊಡುತ್ತೇನೆಂದುದು ಏತಕ್ಕೆ? ನನ್ನನ್ನು ಯಮನಿಗೆ ಕೊಡುವುದರಿಂದ ಯಮನ ಯಾವ ಕೆಲಸವು ನೆರವೇರುತ್ತೆ" ಎಂದುಕೊಂಡನು.

**ಅನುಪಶ್ಯ ಯಥಾಪೂರ್ವೇ ಪ್ರತಿಪಶ್ಯತಥಾಪರೇ ।**
**ಸಸ್ಯಮಿವಮರ್ತ್ಯಃ ಪಚ್ಯತೇ ಸಸ್ಯಮಿವಾಜಾಯತೇ ಪುನಃ ॥**

ಪ್ರಾಚೀನರು ಹೇಗೆ ನಡೆದುಕೊಂಡರು ಎಂಬುದನ್ನು ನೆನೆ; ಆಧುನಿಕರು ಹೇಗೆ ವರ್ತಿಸುತ್ತಾರೆ ಎಂಬುದನ್ನೂ ಗಮನಿಸು. ಮರ್ತ್ಯನು ಕಾಳುಗಳಂತೆ ಹಣ್ಣಾಗುತ್ತಾನೆ, ಉದುರುತ್ತಾನೆ ಮತ್ತೆ ಅವನು ಕಾಳುಗಳಂತೆ ಹುಟ್ಟುತ್ತಾನೆ.

**ವೈಶ್ವಾನರಃ ಪ್ರವಿಶತ್ಯತಿಥಿಃ ಬ್ರಾಹ್ಮಣೋಗೃಹಾನ್ ।**
**ತಸ್ಯೈತಾಂ ಶಾಂತಿಂ ಕುರ್ವಂತಿ ಹರವೈವಸ್ವತೋದಕಂ ॥**

ಪವಿತ್ರವಾದ ಬ್ರಾಹ್ಮಣ ಅತಿಥಿಯು, ಮನೆಗಳನ್ನು ಅಗ್ನಿಯಂತೆ ಪ್ರವೇಶಿಸುತ್ತಾನೆ. ಆ ಗೃಹಸ್ಥರು ಅವನನ್ನು ಪ್ರಸಿದ್ಧವಾದ ಶಾಂತಿ ನೈವೇದ್ಯದಿಂದ ಸಂತುಷ್ಟಿಗೊಳಿಸುತ್ತಾರೆ. ಓ ಯಮಧರ್ಮರಾಜನೇ ನೀರನ್ನು ತೆಗೆದುಕೊಂಡುಬಾ.

**ಆಶಾಪ್ರತೀಕ್ಷೇ ಸಂಗತಂ ಸೂನೃತಾಂಚ ।**
**ಇಷ್ಟಾಪೂರ್ತೇ ಪುತ್ರಪಶೂಂಶ್ಚ ಸರ್ವಾನ್ ॥**
**ಏತತ್‌ವೃಂಕ್ತೇ ಪುರುಷಸ್ಯಾಲ್ಪಮೇಧಸೋ ।**
**ಯಸ್ಯಾನಶ್ನನ್ ವಸತಿ ಬ್ರಾಹ್ಮಣೋ ಗೃಹೇ ॥**

ಯಾವ ಅಲ್ಪಬುದ್ಧಿಯಾದವನ ಮನೆಯಲ್ಲಿ ಬ್ರಾಹ್ಮಣನು ಆಹಾರವಿಲ್ಲದೆ ಇರುತ್ತಾನೆಯೋ ಅಂಥಹವನ ಆಶೆ ಆಕಾಂಕ್ಷೆಗಳೂ, ಸತ್ಸಂಗದ ಫಲ,

ಮಧುರವೂ ಪ್ರಯೋಜನಕಾರಿಯೂ ಆದ ಮಾತಿನಿಂದ ಒದಗುವ ಫಲ, ಧರ್ಮಕಾರ್ಯಗಳು, ಪರೋಪಕಾರ್ಯ, ಪಶುಪುತ್ರರು ಎಲ್ಲರೂ ಎಲ್ಲವೂ ನಾಶವಾಗುತ್ತದೆ.

**ತಿಸ್ರೋ ರಾತ್ರೀರ್ಯದ ವಾತ್ಸೀರ್ಗಹೇಮೇ ।**
**ಅನಶ್ನನ್ ಬ್ರಹ್ಮನ್ ಅತಿಥಿರ್ನಮಸ್ಯಃ ॥**
**ನಮಸ್ತೇಽಸ್ತು ಬ್ರಹ್ಮನ್ ಸ್ವಸ್ತಿ ಮೇಽಸ್ತು ।**
**ತಸ್ಮಾತ್ ಪ್ರತಿ ತ್ರೀನ್ ವರಾನ್ ವೃಣೀಷ್ವ ॥**

" ಓ ಸತ್ಪುರುಷನೇ ಗೌರವಾರ್ಹ ಅತಿಥಿಯಾದ ನೀನು ನನ್ನ ಮನೆಯಲ್ಲಿ ಮೂರು ರಾತ್ರಿ ಆಹಾರವಿಲ್ಲದೆ ತಂಗಿದ್ದೀಯೆ, ಆ ಕಾರಣಕ್ಕಾಗಿ ಮೂರು ವರಗಳನ್ನು ಆರಿಸಿಕೋ. ಓ ಪವಿತ್ರ ಮೂರ್ತಿ, ನಿನಗಿದೋ ನಮಸ್ಕಾರ. ನಿನಗೆ ಮಂಗಳವಾಗಲಿ " ಎಂದು ಯಮನು ಹೇಳುತ್ತಾನೆ.

**ಶಾಂತಸಂಕಲ್ಪಃ ಸುಮನಾ ಯಥಾಸ್ಯಾತ್ ।**
**ವೀತಮನ್ಯುಃ ಗೌತಮೋಮಾಽಭಿಮೃತ್ಯೋ ॥**
**ತ್ವತ್ ಪ್ರಸೃಷ್ಟಂ ಮಾಽಭಿವದೇತ್ ಪ್ರತೀತ ।**
**ಏತತ್ ತ್ರಯಾಣಾಂ ಪ್ರಥಮಂವರಂ ವೃಣೇ ॥**

ಆಗ ನಚಿಕೇತನು ಹೇಳುತ್ತಾನೆ " ಓ ಮೃತ್ಯು ಮೊದಲನೆಯದಾಗಿ ನಾನು ಈ ವರವನ್ನು ಆರಿಸಿಕೊಳ್ಳುತ್ತೇನೆ. ನನ್ನ ತಂದೆ ಗೌತಮನು ಸಂತೋಷದಿಂದಿರಲಿ, ಕೋಪಕಾತರತೆಗಳಿಂದ ಮುಕ್ತನಾಗಿರಲಿ, ನೀನು ನನ್ನನ್ನು ಹಿಂದಕ್ಕೆ ಕಳುಹಿಸಿದಾಗ ಅವರು ನನ್ನನು ಗುರುತಿಸಿ ಸ್ವಾಗತಿಸಲಿ."

**ಯಥಾಪುರಸ್ತಾತ್ ಭವಿತಾ ಪ್ರತೀತಾ ।**
**ಔದ್ದಾಲಕಿರಾರುಣಿರ್ಮತ್ ಪ್ರಸೃಷ್ಟಃ ॥**
**ಸುಖಂರಾತ್ರೀಃ ಶಯಿತಾ ವೀತಮನ್ಯುಃ ।**
**ತ್ವಾಂ ದದೃಶಿವಾನ್ ಮೃತ್ಯುಮುಖಾತ್ ಪ್ರಮುಕ್ತಂ ॥**

ಯಮನು ಹೇಳುತ್ತಾನೆ "ಮೃತ್ಯುವಿನ ದವಡೆಯಿಂದ ಬಿಡುಗಡೆ ಹೊಂದಿದ ನಿನ್ನನ್ನು, ನನ್ನ ಅಪ್ಪಣೆಯಂತೆ ಗೌತಮನು ಗುರುತಿಸುತ್ತಾನೆ; ನಿನ್ನ ವಿಷಯಕ್ಕೆ ಅವನು ಎಂದಿನಂತೆಯೇ ಇರುತ್ತಾನೆ. ಮತ್ತು ಆತನು ರಾತ್ರಿಯಲ್ಲಿ ಸುಖವಾಗಿ ನಿದ್ರೆಮಾಡುತ್ತಾ ಕೋಪರಹಿತನಾಗುತ್ತಾನೆ."

ಸ್ವರ್ಗೇಲೋಕೇ ನ ಭಯಂ ಕಿಂಚನಾಸ್ತಿ ।
ನತತ್ರತ್ವಂ ನ ಜರಯಾಬಿಭೇತಿ ॥
ಉಭೇತೀರ್ತ್ವಾ ಅಶನಾಯಾಪಿಪಾಸೇ ।
ಶೋಕಾತಿಗೋ ಮೋದತೇ ಸ್ವರ್ಗಲೋಕೇ ॥

ನಚಿಕೇತನು ಹೇಳುತ್ತಾನೆ "ಓ ಮೃತ್ಯುವೇ ಸ್ವರ್ಗದಲ್ಲಿ ಭಯವು ಕಿಂಚಿತ್ತೂ ಇಲ್ಲ; ಅಲ್ಲಿ ನೀನೂ ಇಲ್ಲ, ಮುಪ್ಪಿನ ಭಯವೂ ಅಲ್ಲಿಲ್ಲ. ಸ್ವರ್ಗ ಲೋಕದಲ್ಲಿ ಹಸಿವು ನೀರಡಿಕೆಗಳು ಎರಡನ್ನೂ, ಶೋಕವನ್ನೂ ದಾಟಿ ವ್ಯಕ್ತಿಯು ಸಂತೋಷವನ್ನು ಅನುಭವಿಸುತ್ತಾನೆ."

ಸತ್ವಂಮಗ್ನಿಂ ಸ್ವರ್ಗ್ಯಂ ಅಧ್ಯೇಷಿ ಮೃತ್ಯೋ ।
ಪ್ರಬ್ರೂಹಿ ತಂ ಶ್ರದ್ಧಧಾನಾಯಮಹ್ಯಂ ॥
ಸ್ವರ್ಗಲೋಕಾ ಅಮೃತತ್ವಂ ಭಜಂತ ।
ಏತತ್ದ್ವಿತೀಯೇನ ವೃಣೇವರೇಣ ॥

"ಓ ಮೃತ್ಯುವೇ ಸ್ವರ್ಗಕ್ಕೆ ಒಯ್ಯುವ ಅಗ್ನಿಯಾಗವು ಯಾವುದೆಂಬು ದನ್ನು ನೀನು ಬಲ್ಲೆ. ಶ್ರದ್ಧೆಯಿಂದ ಕೂಡಿರುವ ನನಗೆ ಅದನ್ನು ಬೋಧಿಸು. ಸ್ವರ್ಗದಲ್ಲಿರುವವರು ಮೃತ್ಯುರಹಿತರು ಎಂದು ಕೇಳಿದ್ದೇನೆ. ಇವನ್ನೇ ನಾನು ಎರಡನೆಯ ವರವಾಗಿ ಆರಿಸಿಕೊಳ್ಳುತ್ತೇನೆ."

ಪ್ರತೇಬ್ರವೀಮಿ ತದುಮೇ ನಿಬೋಧ ।
ಸ್ವರ್ಗ್ಯಮಗ್ನಿಂ ನಚಿಕೇತಃ ಪ್ರಜಾನನ್ ।
ಅನಂತಲೋಕಾಪ್ತಿಮಥೋ ಪ್ರತಿಷ್ಠಾಂ ।
ವಿದ್ಧಿತ್ವಮೇತಂ ನಿಹಿತಂ ಗುಹಾಯಾಂ ॥

ಯಮನು ಹೇಳುತ್ತಾನೆ " ಸ್ವರ್ಗಕ್ಕೆ ಒಯ್ಯುವ ಅಗ್ನಿಯಾಗವ್ಯಾವು ದೆಂಬುದನ್ನು ಚೆನ್ನಾಗಿ ಬಲ್ಲವನಾಗಿ ನಾನು ಅದನ್ನು ನಿನಗೆ ತಿಳಿಸುತ್ತಿದ್ದೇನೆ. ಓ ನಚಿಕೇತಾ, ಅದನ್ನು ನನ್ನಿಂದ ತಿಳಿದುಕೋ. ಅನಂತಲೋಕವನ್ನು ಪಡೆ ಯುವ ದಾರಿ, ಈ ಲೋಕದ ಆಧಾರ. ಅದು ವೇದವನ್ನು ತಿಳಿದವರ ಹೃದ ಯದಲ್ಲಿ ಗೂಢವಾಗಿ ಅಡಗಿದೆ ಎಂಬುದಾಗಿ ಇದನ್ನು ತಿಳಿದುಕೋ."

**ಲೋಕಾದಿಮಗ್ನಿಂ ತಮುವಾಚ ತಸ್ಮೈ ।**
**ಯಾ ಇಷ್ಟಕಾ ಯಾವತೀರ್ವಾಯಥಾವಾ ॥**
**ಸಚಾಪಿ ತತ್ ಪ್ರತ್ಯವದತ್ ಯಥೋಕ್ತಂ ।**
**ಅಥಾಸ್ಯ ಮೃತ್ಯುಃ ಪುನರೇವಾಹತುಷ್ಟಃ ॥**

ಅನಂತರ ಯಮನು ಈ ಜಗತ್ತಿನ ಮೂಲವಾದ ಆ ಅಗ್ನಿಯನ್ನೂ ಅದರ ವೇದಿಕೆಯನ್ನು ರಚಿಸಲು ಯಾವ ರೀತಿಯ ಎಷ್ಟು ಇಟ್ಟಿಗೆಗಳು ಬೇಕೆಂಬುದನ್ನೂ, ಯಜ್ಞಾಗ್ನಿಯನ್ನು ಹೊತ್ತಿಸುವುದು ಹೇಗೆಂಬುದನ್ನೂ ವಿವರಿಸಿದನು. ನಚಿಕೇತನು ಈ ವರದಿಯನ್ನು ಕೇಳಿದಂತೆ ಪ್ರತಿಯೊಂದನ್ನೂ ಪುನರುಚ್ಚರಿಸಿದನು. ಅದರಿಂದ ಸುಪ್ರೀತನಾದ ಯಮನು ಹೇಳುತ್ತಾನೆ.

**ತಮಬ್ರವೀತ್ ಪ್ರೀಯಮಾಣೋ ಮಹಾತ್ಮಾ ।**
**ವರಂ ತವೇಹಾದ್ಯದದಾಮಿ ಭೂಯಃ ॥**
**ತವೈವನಾಮ್ನಾ ಭವಿತಾಯಮಗ್ನಿಃ ।**
**ಸೃಂಕಾಂಚೇಮಾನ್ ಅನೇಕರೂಪಾಂಗೃಹಾಣ ॥**

" ನಚಿಕೇತ, ನಾನು ನಿನ್ನ ವಿಚಾರದಲ್ಲಿ ತುಂಬ ಸಂತುಷ್ಟನಾಗಿದ್ದೇನೆ. ಈಗಿನಿಂದಲೇ ಇಲ್ಲಿಯೇ ನಿನಗೆ ಇನ್ನೊಂದು ಹೆಚ್ಚಿನ ವರವನ್ನು ಕೊಡು ತ್ತೇನೆ. ಇನ್ನು ಮುಂದೆ ಈ ಅಗ್ನಿಯು ನಿನ್ನ ಹೆಸರನ್ನು ಪಡೆಯಲಿ. ಅಲ್ಲದೆ ಈ ಅನೇಕ ವರ್ಣಗಳ ಹಾರವನ್ನು ಸ್ವೀಕರಿಸು " ಎಂದನು.

**ತ್ರಿಣಾಚಿಕೇತ ಸ್ತ್ರಿಭಿರೇತ್ಯ ಸಂಧಿಂ ।**
**ತ್ರಿಕರ್ಮಕೃತ್ ತರತಿಜನ್ಮಮೃತ್ಯೂ ॥**
**ಬ್ರಹ್ಮಜಜ್ಞಂ ದೇವಮೀಡ್ಯಂ ವಿದಿತ್ವಾ ॥**
**ನಿಚಾಯ್ಯೇಮಾಂ ಶಾಂತಿಮತ್ಯಂತಮೇತಿ ॥**

" ನಚಿಕೇತ ಯಜ್ಞವನ್ನು ಮೂರುಸಲ ಮಾಡಿ, ತಾಯಿ ತಂದೆ ಮತ್ತು ಗುರು ಈ ಮೂವರ ಉಪದೇಶದಿಂದ ಕೂಡಿಕೊಂಡವನು ಮತ್ತು ವೇದಾಧ್ಯಯನ, ಕರ್ಮಾಚರಣೆ, ದಾನ ಮೊದಲಾದ ಮೂರು ಕರ್ತವ್ಯಗಳನ್ನೂ ನೆರವೇರಿಸಿದವನು, ಹುಟ್ಟು ಸಾವುಗಳ ಆವೃತ್ತವನ್ನು ದಾಟುತ್ತಾನೆ. ಬ್ರಹ್ಮಜ್ಞನೂ, ಪೂಜಾರ್ಹನೂ, ಸರ್ವಜ್ಞನೂ, ಪ್ರಕಾಶಮಾನನೂ ಆದ ಅಗ್ನಿಯನ್ನು ತಿಳಿದು ಸಾಕ್ಷಾತ್ಕಾರಮಾಡಿಕೊಂಡಮೇಲೆ ಪರಮಶಾಂತಿಯನ್ನು ಪಡೆಯುತ್ತಾನೆ.

**ತ್ರಿಣಾಚಿಕೇತಸ್ತ್ರಯಮೇತತ್ ವಿದಿತ್ವಾ ।**
**ಯ ಏವಂ ವಿದ್ವಾಂಶ್ಚಿನುತೇ ನಾಚಿಕೇತಂ ॥**
**ಸಮೃತ್ಯುಪಾಶಾ ಪುರತಃ ಪ್ರಣೋದ್ಯ ।**
**ಶೋಕಾತಿಗೋಮೋದತೇ ಸ್ವರ್ಗಲೋಕೇ ॥**

ಇಟ್ಟಿಗೆಗಳ ವಿಷಯದ ಮೂರು ವಿವರಗಳನ್ನು ತಿಳಿದ ಜ್ಞಾನಿಯಾದ ಪುರುಷನು ಮೂರುಸಲ ನಾಚಿಕೇತವನ್ನು ಯಾರು ಆಚರಿಸುತ್ತಾರೋ ಅವರು ದೇಹಪತನದ ಮುನ್ನವೇ ಮೃತ್ಯುಪಾಶವನ್ನು ಕತ್ತರಿಸಿ ದುಃಖಮುಕ್ತವಾದ ಸ್ವರ್ಗಸುಖವನ್ನು ಅನುಭವಿಸುತ್ತಾರೆ.

**ಏಷತೇಽಗ್ನಿರ್ನಚಿಕೇತಃ ಸ್ವರ್ಗ್ಯೋ ।**
**ಯಮವೃಣೀಥಾಃ ದ್ವಿತೀಯೇನವರೇಣ ॥**
**ಏತಮಗ್ನಿಂ ತವೈವ ಪ್ರವಕ್ಷ್ಯನ್ತಿ ಜನಾಸಃ ।**
**ತೃತೀಯಂ ವರಂ ನಚಿಕೇತೋವೃಣೀಷ್ವ ॥**

" ಓ ನಚಿಕೇತಾ, ಇದೇ ಅಗ್ನಿ ಸ್ವರ್ಗಕ್ಕೆ ಒಯ್ಯುವಂಥದು. ಇದನ್ನೇ ನೀನು ಎರಡನೆಯ ವರವಾಗಿ ಆರಿಸಿಕೊಂಡದ್ದು. ಜನರು ಇದನ್ನು ನಿನ್ನ

ಹೆಸರಿನಿಂದಲೇ ಕರೆಯುತ್ತಾರೆ. ಈಗ ಓ ನಚಿಕೇತಾ ಮೂರನೆಯ ವರವನ್ನು ಆರಿಸಿಕೋ".

**ಯೇಯಂಪ್ರೇತೇ ವಿಚಿಕಿತ್ಸಾ ಮನುಷ್ಯೇ ।**
**ಅಸ್ತಿತ್ಯೇಕೇ ನಾಯಮಸ್ತೀತಿಚೈಕೇ ॥**
**ಏತತ್ ವಿದ್ಯಾಂ ಅನುಶಿಷ್ಟಸ್ತ್ವಯಾಹಂ ।**
**ವರಾಣಾಮೇಷ ವರಸ್ತೃತೀಯಃ ॥**

ನಚಿಕೇತನು ಕೇಳುತ್ತಾನೆ " ಓ ಧರ್ಮರಾಯ, ಮನುಷ್ಯನು ಸತ್ತಾಗ ಈ ಸಂದೇಹ ಉಂಟು ; ಕೆಲವರು ಅವನು ಇದ್ದಾನೆಂದು ಹೇಳುತ್ತಾರೆ, ಕೆಲವರು ಅವನು ಇರುವುದಿಲ್ಲವೆನ್ನುತ್ತಾರೆ. ಈ ವಿಷಯದಲ್ಲಿ ನಿನ್ನಿಂದ ಉಪದೇಶವನ್ನು ಪಡೆಯುವ ಅಪೇಕ್ಷೆ ನನ್ನದು. ವರಗಳಲ್ಲಿ ಇದು ನನ್ನ ಮೂರನೆಯ ವರ. "

**ದೇವೈರತ್ರಾಪಿ ವಿಚಿಕಿತ್ಸಿತಂಪುರಾ ।**
**ನಹಿ ಸುವಿಜ್ಞೇಯಂ ಅಣುರೇಷಧರ್ಮಃ ॥**
**ಅನ್ಯಂವರಂ ನಚಿಕೇತೋವೃಣೀಷ್ವ ।**
**ಮಾಮೋಪರೋತ್ಸೀಃ ಅತಿಮಾಸೃಜೈನಂ ॥**

ಯಮನು ಹೇಳುತ್ತಾನೆ " ಈ ವಿಷಯದಲ್ಲಿ ಹಿಂದೆ ದೇವತೆಗಳಿಗೆ ಕೂಡ ಸಂದೇಹವಿತ್ತು ; ವಿಷಯ ತುಂಬ ಸೂಕ್ಷ್ಮವಾದದ್ದು ಅರ್ಥವಾಗುವುದು ಕಷ್ಟ, ಆದ್ದರಿಂದ ಓ ನಚಿಕೇತಾ ಬೇರೆ ವರವನ್ನು ಆರಿಸಿಕೋ, ಈ ಒಂದು ವಿಷಯದಲ್ಲಿ ನನ್ನನ್ನು ಬಲವಂತಮಾಡಬೇಡ. ನನ್ನನ್ನು ಬಿಟ್ಟುಬಿಡು."

**ದೇವೈರತ್ರಾಪಿ ವಿಚಿಕಿತ್ಸಿತಂ ಕಿಲ ।**
**ತ್ವಂ ಚ ಮೃತ್ಯೋಯನ್ನ ಸುಜ್ಞೇಯಮಾತ್ಥ ॥**
**ವಕ್ತಾ ಚಾಸ್ಯತ್ವಾದೃಗನ್ಯೋನಲಭ್ಯೋ ।**
**ನಾನ್ಯೋ ವರಸ್ತುಲ್ಯ ಏತಸ್ಯ ಕಶ್ಚಿತ್ ॥**

ನಚಿಕೇತನು ಹೇಳುತ್ತಾನೆ "ಓ ಮೃತ್ಯು, ದೇವತೆಗಳಿಗೆ ಕೂಡ ಈ ವಿಷಯದಲ್ಲಿ ಸಂದೇಹವಿತ್ತು, ಇದು ತಿಳಿಯಲು ಕಷ್ಟವಾದದ್ದು ಎನ್ನುತ್ತೀಯೆ ಆದರೆ ನಿನ್ನಂಥ ಮತ್ತೊಬ್ಬ ಗುರು ಸಿಕ್ಕುವುದು ದುರ್ಲಭ. ಬೇರೆ ಯಾವ ವರವೂ ಇದಕ್ಕೆ ಸಮನಲ್ಲ ಎಂಬುದೇ ನನ್ನ ಭಾವನೆ."

**ಶತಾಯುಷಃ ಪುತ್ರಪೌತ್ರಾನ್ ವೃಣೀಷ್ವ ।**
**ಬಹೂನ್ ಪಶೂನ್ ಹಸ್ತಿಹಿರಣ್ಯಮಶ್ವಾನ್ ॥**
**ಭೂಮೇರ್ಮಹದಾಯತನಂ ವೃಣೀಷ್ವ ।**
**ಸ್ವಯಂ ಚ ಜೀವಶರದೋಯಾವದಿಚ್ಛಸಿ ॥**

ಯಮನು ಹೇಳುತ್ತಾನೆ "ಓ ನಚಿಕೇತಾ ನೂರು ವರ್ಷ ಬಾಳುವ ಪುತ್ರ ಪೌತ್ರರನ್ನು ಅನೇಕ ಹಸುಗಳು, ಆನೆ, ಕುದುರೆಗಳು, ಯಥೇಚ್ಛವಾದ ಚಿನ್ನ ಇವನ್ನೆಲ್ಲಾ, ಆರಿಸಿಕೋ. ಈ ಭೂಮಿಯಮೇಲೆ ವಿಶಾಲವಾದ ಪ್ರದೇಶ ವನ್ನು ಆರಿಸಿಕೋ. ನೀನೂ ಕೂಡ ನಿನಗೆ ಇಷ್ಟಬಂದಷ್ಟು ಶರತ್ಕಾಲಗಳು ಬೇಕಾದರೆ ಬದುಕು."

**ಏತತ್ ತುಲ್ಯಂ ಯದಿಮನ್ಯಸೇ ವರಂ ।**
**ವೃಣೀಷ್ವ, ವಿತ್ತಂ ಚಿರಜೀವಿಕಾಂ ಚ ;**
**ಮಹಾಭೂಮೌ ನಚಿಕೇತಸ್ತ್ವಮೇಧಿ ।**
**ಕಾಮಾನಾಂ ತ್ವಾ ಕಾಮಭಾಜಂಕರೋಮಿ ॥**

ಇದಕ್ಕೆ ಸಮ ಎಂದು ನೀನು ಭಾವಿಸುವ ಐಶ್ವರ್ಯ, ದೀರ್ಘಜೀವನ ಗಳನ್ನು ವರವಾಗಿ ಕೇಳಿಕೋ. ಈ ವಿಶಾಲವಾದ ಭೂಮಿಗೆ ಅರಸನಾಗಿ ಇರು. ಎಲ್ಲ ಭೋಗಗಳನ್ನೂ ನೀನು ಅನುಭವಿಸುವವನನ್ನಾಗಿ ಮಾಡುತ್ತೇನೆ.

**ಯೇ ಯೇ ಕಾಮಾ ದುರ್ಲಭಾಮರ್ತ್ಯಲೋಕೇ ।**
**ಸರ್ವಾನ್ ಕಾಮಾನ್ ಛನ್ದತಃ ಪ್ರಾರ್ಥಯಸ್ವ ;**
**ಇಮಾರಾಮಾಃ ಸರಥಾಃ ಸತೂರ್ಯಾಃ ।**
**ನಹೀದೃಶಾ ಲಂಭನೀಯಾ ಮನುಷ್ಯೈಃ ॥**
**ಅಭಿರ್ಮತ್ ಪ್ರತ್ತಾಭಿಃ ಪರಿಚಾರಯಸ್ವ ।**
**ನಚಿಕೇತೋಮರಣಂಮಾನುಪ್ರಾಕ್ಷೀಃ ॥**

ಯಮನು ಮತ್ತೂ ಹೇಳುತ್ತಾನೆ, " ಈ ಮರ್ತ್ಯ ಜಗತ್ತಿನಲ್ಲಿ ಪಡೆಯಲು ಕಷ್ಟವಾಗಿರುವ ಎಲ್ಲ ಸುಖಗಳನ್ನೂ ನೀನು ನಿನ್ನ ಇಷ್ಟದಂತೆ ಕೇಳಿಕೋ ; ರಥಗಳೂ, ವಾದ್ಯಗಳೊಡನಿರುವ ಈ ಸುಂದರಿಯರೂ, ಮನುಷ್ಯರಿಗೆ ಇಂಥವು ದುರ್ಲಭ. ಆದರೂ ಇವುಗಳನ್ನು ನನ್ನಿಂದ ಪಡೆದು ಅವುಗಳೊಡನೆ ಇರು. ಆದರೆ ಓ ನಚಿಕೇತಾ ಮೃತ್ಯುವಿನ ವಿಷಯದಲ್ಲಿ ಮಾತ್ರ ಪ್ರಶ್ನಿಸಬೇಡ ".

**ಶ್ವೋಭಾವಾ ಮರ್ತ್ಯಸ್ಯಯದಂತಕೈತತ್ ।**
**ಸರ್ವೇಂದ್ರಿಯಾಣಾಂ ಜರಯಂತಿತೇಜಃ ॥**
**ಅಪಿಸರ್ವಂ ಜೀವಿತಂ ಅಲ್ಪಮೇವ ।**
**ತವೈವ ವಾಹಾಸ್ತವ ನೃತ್ಯಗೀತೇ ॥**

ನಚಿಕೇತನು ಹೇಳುತ್ತಾನೆ, " ಓ ಮೃತ್ಯುವೇ ನೀನು ವಿವರಿಸಿರುವ ಎಲ್ಲ ಸುಖಗಳೂ ಅಶಾಶ್ವತವಾದುವು. ಅವು ಮಾನವನ ಸಕಲೇಂದ್ರಿಯಗಳ ಶಕ್ತಿಯನ್ನೂ ಕ್ಷೀಣಗೊಳಿಸುತ್ತವೆ. ಅಲ್ಲದೆ ಎಲ್ಲ ಬದುಕೂ ಕೇವಲ ಅಲ್ಪ, ನೀನು ಹೇಳುವ ಎಲ್ಲ ರಥಗಳೂ ನೃತ್ಯಗೀತೆಗಳೂ ನಿನ್ನಲ್ಲಿಯೇ ಇರಲಿ."

**ನವಿತ್ತೇನ ತರ್ಪಣೀಯೋ ಮನುಷ್ಯೋ ।**
**ಲಪ್ಸ್ಯಾಮಹೇ ವಿತ್ತಮದ್ರಾಕ್ಷ್ಮಚೇಚೇತ್ವಾಂ ॥**
**ಜೀವಿಷ್ಯಾಮೋ ಯಾವದೀಶಿಷ್ಯಸಿ ತ್ವಂ ।**
**ವರಸ್ತುಮೇ ವರಣೀಯಃ ಸಏವ ॥**

ಮತ್ತೂ ಹೇಳುತ್ತಾನೆ, " ಮನುಷ್ಯನು ಎಂದೂ ಐಶ್ವರ್ಯದಿಂದ ತೃಪ್ತನಾಗಿಲ್ಲ. ಅಲ್ಲದೆ ನಿನ್ನನ್ನು ನೋಡಿರುವುದರಿಂದ ನಮಗೆ ಐಶ್ವರ್ಯವು ದೊರೆಯುವುದು ಖಚಿತ ; ನೀನು ಆಳುವವರೆವಿಗೂ ನಾವು ಬದುಕುವುದು ಖಚಿತ. ಆದರೆ ನಾನು ಪಡೆಯಲು ಅರ್ಹವಾಗಿರುವುದು ಅದು ಒಂದು ಮಾತ್ರವೇ. "

**ಅಜೀರ್ಯತಾಂ ಅಮೃತಾನಾಂ ಉಪೇತ್ಯ ।**
**ಜೀರ್ಯನ್ ಮರ್ತ್ಯಃ ಕ್ವಧಃಸ್ಥಃ ಪ್ರಜಾನನ್ ॥**
**ಅಭಿಧ್ಯಾಯನ್ವರ್ಣ ರತಿಪ್ರಮೋದಾನ್ ।**
**ಅತಿದೀರ್ಘೇ ಜೀವಿತೇ ಕೋರಮೇತ ॥**

ಮತ್ತೆ ಹೇಳುತ್ತಾನೆ, "ವಯಸ್ಸೇ ಇಲ್ಲದ ಅಮೃತಾತ್ಮರನ್ನು ಸಮೀಪಿಸಿ ತಿಳಿದ ಯಾವ ಮಾನವನು ತಾನೇ ಜರೆ ಮತ್ತು ಮೃತ್ಯುಗಳಿಗೆ ವಶನಾಗಿದ್ದು ನೃತ್ಯಗೀತಗಳಿಂದ ಒದಗುವ ಸಂತೋಷವನ್ನು ದೀರ್ಘ ಜೀವನ ದಲ್ಲಿ ರಮಿಸಬಯಸುತ್ತಾನೆ ?"

**ಯಸ್ಮಿನ್ನಿದಂ ವಿಚಿಕಿತ್ಸಂತಿ ಮೃತ್ಯೋ ।**
**ಯತ್ಸಾಂಪರಾಯೇ ಮಹತಿ ಬ್ರೂಹಿನಸ್ತತ್ ॥**
**ಯೋಽಯಂ ವರೋ ಗೂಢಮನುಪ್ರವಿಷ್ಟೋ ।**
**ನಾನ್ಯಂ ತಸ್ಮಾತ್ ನಚಿಕೇತಾವೃಣೀತೇ ॥**

"ಓ ಮೃತ್ಯುವೇ, ಮಹದ್ವಿಷಯವಾದ ಇದರಾಚೆಯನ್ನು ಕುರಿತು ತಿಳಿಸು, ಅದರ ವಿಷಯದಲ್ಲೇ ಜನರಿಗೆ ಸಂದೇಹವಿರುವುದು. ಗಹನವೂ ರಹಸ್ಯಪೂರ್ಣವೂ ಆದ ಇದನ್ನು ಬಿಟ್ಟು ಬೇರೆ ಯಾವ ವರವನ್ನೂ ನಚಿ ಕೇತನು ವರಿಸಬಯಸುವುದಿಲ್ಲ."

ಅಧ್ಯಾಯ ೧—ವಲ್ಲಿ ೨

**ಅನ್ಯಚ್ಛ್ರೇಯೋಽನ್ಯದುತೈವಪ್ರೇಯಃ-**
**ತೇ ಉಭೇ ನಾನಾರ್ಥೇ ಪುರುಷಂ ಸಿನೀತಃ ।**
**ತಯೋಃ ಶ್ರೇಯ ಆದದಾನಸ್ಯ ಸಾಧು ಭವತಿ**
**ಹೀಯತೇಽರ್ಥಾದ್ಯ ಉ ಪ್ರೇಯೋ ವೃಣೀತೇ ॥**

ಯಮನು ಹೇಳುತ್ತಾನೆ "ಒಂದು ವಿಷಯವು ಚೆನ್ನಾಗಿದೆ ಮತ್ತು ಶಾಂತವಾಗಿದೆ. ಇನ್ನೊಂದೂ ಅಷ್ಟೇ ಆನಂದದಾಯಕವಾಗಿದೆ, ಆದರೆ ಇವೆರಡೂ ಬೇರೆ ಬೇರೆ ಅರ್ಥಗಳಿಂದ ಮನುಷ್ಯನನ್ನು ಬಳಸಿಕೊಳ್ಳುತ್ತವೆ.

ಇವುಗಳಲ್ಲಿ ಯಾರು ಶ್ರೇಯವನ್ನು ಪಡೆಯುತ್ತಾರೋ ಅವರಿಗೆ ಅದೇ ಏಳಿಗೆ. ಆದರೆ ಪ್ರೇಯವನ್ನು ಕೋರುವವರು ಜೀವಿತದ ಗುರಿಯಿಂದ ವಂಚಿಸಲ್ಪಟ್ಟ ವರಾಗುತ್ತಾರೆ.

**ಶ್ರೇಯಶ್ಚ ಪ್ರೇಯಶ್ಚ ಮನುಷ್ಯಮೇತ**
**ಸ್ತೌಸಂಪರೀತ್ಯವಿವಿನಕ್ತಿಧೀರಃ ।**
**ಶ್ರೇಯೋಹಿಧೀರೋಽಭಿಪ್ರೇಯಸೋವೃಣೀತೇ**
**ಪ್ರೇಯೋ ಮಂದೋಯೋಗಕ್ಷೇಮಾದ್ವೃಣೀತೇ ॥೨॥**

"ಶ್ರೇಯ ಮತ್ತು ಪ್ರೇಯಗಳೆರಡೂ ಮನುಷ್ಯರಿಗೆ ಒದಗುತ್ತವೆ. ವಿಚಾರಗ್ರಾಹಿಯಾದ ಮನಸ್ಸು ಅವುಗಳನ್ನು ವಿಮರ್ಶಿಸಿ ಬೇರೆ ಬೇರೆಯಾಗಿ ಮಾಡುತ್ತದೆ. ಧೀರನು ಶ್ರೇಯವನ್ನು ಮಾತ್ರ ಆರಿಸಿಕೊಳ್ಳುತ್ತಾನೆ. ಮಂದವಾದ ಆತ್ಮವು ಪ್ರೇಯವನ್ನು ಅಪೇಕ್ಷಿಸಿದರೂ ಅದರಿಂದ ಪ್ರಯೋಜನ ಪಡೆಯುವ ಮತ್ತು ನೆಲೆಗೊಳಿಸುವ ಕ್ರಮವನ್ನು ಕಾಣದಾಗುತ್ತದೆ."

**ಸ ತ್ವಂ ಪ್ರಿಯಾನ್ ಪ್ರಿಯರೂಪಾಂಶ್ಚ ಕಾಮಾನ್**
**ಅಭಿಧ್ಯಾಯನ್ನಚಿಕೇತೋಽತ್ಯಸ್ರಾಕ್ಷೀಃ ।**
**ನೈತಾಂ ಸೃಂಕಾಂ ವಿತ್ತಮಯೀಮವಾಪ್ತೋ**
**ಯಸ್ಯಾಂ ಮಜ್ಜಸ್ತಿ ಬಹವೋಮನುಷ್ಯಾಃ ॥೩॥**

"ಓ ನಚಿಕೇತಾ ನೀನು ಶ್ರೇಯ ಮತ್ತು ಪ್ರೇಯಗಳಲ್ಲಿ ಇಷ್ಟಸಿದ್ಧಿ ಯನ್ನು ಕಂಡಿರುವೆ ಮತ್ತು ಅದನ್ನು ನಿನ್ನಿಂದ ದೂರವಾಗಿರುವಂತೆ ತ್ಯಜಿಸಿ ರುವೆ. ನೀನು ಐಶ್ವರ್ಯವೆಂಬ, ಅನೇಕರಿಗೆ ಸರ್ವನಾಶಹೇತುವಾದ ಬಲೆ ಯಲ್ಲಿ ಸಿಕ್ಕಿಹಾಕಿಕೊಳ್ಳಲಿಲ್ಲ."

**ದೂರಮೇತೇ ವಿಪರೀತೇ ವಿಷೂಚೀ**
**ಅವಿದ್ಯಾ ಯಾ ಚ ವಿದ್ಯೇತಿಜ್ಞಾತಾ ।**
**ವಿದ್ಯಾಭೀಪ್ಸಿನಂ ನಚಿಕೇತಸಂ ಮನ್ಯೇ**
**ನ ತ್ವಾ ಕಾಮಾ ಬಹವೋಽಲೋಲುಪನ್ತ ॥೪॥**

" ಜನಗಳಿಗೆ ಗೊತ್ತಿರುವ ವಿದ್ಯೆ ಮತ್ತು ಅವಿದ್ಯೆ ಎಂಬ ಎರಡು ಗುಣಗಳೂ ಒಂದಕ್ಕೊಂದು ದೂರವಾಗಿದ್ದು ಎರಡು ಬೇರೆ ಬೇರೆ ದಿಕ್ಕುಗಳಲ್ಲಿ ವಕ್ರಗತಿಯಲ್ಲಿ ಸಾಗುತ್ತಿವೆ. ಆದರೆ ನಚಿಕೇತ, ಮನುಷ್ಯರು ಮತ್ತ್ಯಾವುದಕ್ಕೂ ಕೊಡದ ಪ್ರಾಶಸ್ತ್ಯವನ್ನು ವಿದ್ಯೆಗೆ ಮಾತ್ರ ಕೊಟ್ಟು ಉಳಿಸಿಕೊಳ್ಳುವುದನ್ನು ನಾನು ಅಪೇಕ್ಷಿಸುತ್ತೇನೆ."

**ಅವಿದ್ಯಾಯಾಮನ್ತರೇವರ್ತಮಾನಾಃ**
**ಸ್ವಯಂ ಧೀರಾಃ ಪಂಡಿತ-ಮನ್ಯಮಾನಾಃ ।**
**ದಂದ್ರಮ್ಯಮಾಣಾಃ ಪರಿಯನ್ತಿಮೂಢಾ**
**ಅಂಧೇನೈವ ನೀಯಮಾನಾಯಥಾಂಧಾಃ ॥೫॥**

ಅವಿದ್ಯಾವಂತರು ತಮ್ಮ ಕ್ಷೇತ್ರದಲ್ಲಿ ತಾವು ವಾಸಿಸುತ್ತಿದ್ದರೆ; ವಿದ್ಯಾವಂತರು ತಾವು ಮಹಾ ಪಂಡಿತರೆಂದು ಭಾವಿಸಿಕೊಂಡು ತಮ್ಮ ಗಮನದಲ್ಲಿ ತಬ್ಬಿಬ್ಬಾಗಿ ನಡೆಯುತ್ತಾ ಅನೇಕ ಅಪಾಮಾರ್ಗಗಳನ್ನು ಹಿಡಿಯುತ್ತಾ ನಿರಾಶರಾಗಿ ತಿರುಗುತ್ತ ಒಬ್ಬ ಕುರುಡನು ಇನ್ನೊಬ್ಬ ಕುರುಡನನ್ನು ಹಿಂಬಾಲಿಸುವಂತೆ ನಡೆಯುತ್ತಾರೆ.

**ನ ಸಾಂಪರಾಯಃ ಪ್ರತಿಭಾತಿ ಬಾಲಂ**
**ಪ್ರಮಾದ್ಯನ್ತಂ ವಿತ್ತಮೋಹೇನ ಮೂಢಂ ।**
**ಅಯಂ ಲೋಕೋ ನಾಸ್ತಿ ಪರ ಇತಿ**
**ಮಾನೀ ಪುನಃ ಪುನರ್ವಶಮಾಪದ್ಯತೇ ಮೇ ॥೬॥**

" ಕೆಲವರು ಹುಡುಗಬುದ್ಧಿಯಿಂದ ಅಪಾಮಾರ್ಗವನ್ನು ಹಿಡಿದು ಐಶ್ವರ್ಯದ ಥಳುಕಿಗೆ ಮರುಳಾಗಿ ಕುಡುಕರಂತೆ ವರ್ತಿಸಿ ಮೋಕ್ಷಮಾರ್ಗವನ್ನು ಕಾಣದೆ ಇರುತ್ತಾರೆ. ಇಂತಹವರು ಈ ಪ್ರಪಂಚವೇ ಶಾಶ್ವತ ಬೇರೆ ಯಾವ ಲೋಕವೂ ಇಲ್ಲವೆಂದು ಭಾವಿಸುತ್ತ ಮೇಲಿಂದ ಮೇಲೆ ಯಮಧರ್ಮನ ಗುಲಾಮರಾಗುತ್ತಿದ್ದಾರೆ."

ಶ್ರವಣಾಯಾಪಿ ಬಹುಭಿರ್ಯೋ ನ ಲಭ್ಯಃ
ಶೃಣ್ವನ್ತೋಽಪಿ ಬಹವೋಽಯಂ ನ ವಿದ್ಯುಃ ।
ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ ಆಶ್ಚರ್ಯೋ
ಜ್ಞಾತಾ ಕುಶಲಾನುಶಿಷ್ಟಃ ||೭||

"ಯಾರ ವಿಚಾರವನ್ನು ಅನೇಕರು ಕೇಳಲೂ ಸಾಧ್ಯವಿಲ್ಲವೋ, ಕೆಲವರು ಕೇಳಿದ್ದರೂ ಅವನನ್ನು ಪೂರಾ ಅರ್ಥಮಾಡಿಕೊಂಡಿರುವುದಿಲ್ಲ. ಆದರೆ ಅವನನ್ನು ಕುಶಲತೆಯಿಂದ ಗೆಲ್ಲಬಹುದೆಂದೂ ಅವನ ಅಂತರ್ಯಗಳನ್ನು ಚರ್ಚಿಸಬಹುದೆಂದೂ ಕೆಲವರು ಹೇಳುವುದು ಚಮತ್ಕಾರವಾಗಿದೆ. ಆದರಲ್ಲೂ ಕೇಳುವವರು ಅವನನ್ನು ಬಲ್ಲೆವೆಂದೇ ಹೇಳುವುದು ಇನ್ನೂ ಚಮತ್ಕಾರವಾದ ವಿಷಯವಾಗಿದೆ. "

ನ ನರೇಣಾವರೇಣ ಪ್ರೋಕ್ತ ಏಷ
ಸುವಿಜ್ಞೇಯೋ ಬಹುಧಾ ಚಿಂತ್ಯಮಾನಃ ।
ಅನನ್ಯಪ್ರೋಕ್ತೇ ಗತಿರತ್ರ ನಾಸ್ತಿ
ಅಣೀಯಾನ್ ಹ್ಯತರ್ಕ್ಯಮಣುಪ್ರಮಾಣಾತ್ ||೮||

" ಪ್ರಾಕೃತನಾದ ಮನುಷ್ಯನಿಂದ ಉಪದೇಶಿಸಲ್ಪಟ್ಟರೆ ಈ ಆತ್ಮನನ್ನು ಚೆನ್ನಾಗಿ ಅರಿತುಕೊಳ್ಳಲು ಆಗುವುದಿಲ್ಲ. ಏಕೆಂದರೆ ವಾದಿಗಳು ಬಹುವಿಧವಾಗಿ ಇವನನ್ನು ಚಿಂತಿಸುತ್ತಾರೆ. ಅನ್ಯನಿಂದ ಉಪದೇಶಿಸಲ್ಪಡದಿದ್ದರೆ ಇಲ್ಲಿ ಗತಿಯೇ ಇಲ್ಲ. ಆತ್ಮನು ಅಣುಪ್ರಮಾಣಕ್ಕಿಂತ ಸೂಕ್ಷ್ಮನಾಗಿರುವನು ಮತ್ತು ತರ್ಕಕ್ಕೆ ಗೋಚರನಲ್ಲ."

ನೈಷಾ ತರ್ಕೇಣ ಮತಿರಾಪನೇಯಾ
ಪ್ರೋಕ್ತಾನ್ಯೇನೈವಸುಜ್ಞಾನಾಯ ಪ್ರೇಷ್ಠ ।
ಯಾಂ ತ್ವಮಾಪಃ ಸತ್ಯಧೃತಿರ್ಬತಾಸಿ
ತ್ವಾದೃಜ್ಞೋ ಭೂಯಾನ್ನಚಿಕೇತಃ ಪ್ರಷ್ಟಾ ||೯||

" ಓ ನಚಿಕೇತಾ ಆತ್ಮನ ವಿಷಯವಾದ ಜ್ಞಾನವು ಬರೀ ಚರ್ಚೆಯಿಂದ ಉಂಟಾಗತಕ್ಕದ್ದಲ್ಲ. ಬೇರೊಬ್ಬರಿಂದ ತಿಳಿಯಹೇಳಿದಾಗ ನಿಜವಾದ ಜ್ಞಾನ

ಉಂಟಾಗುತ್ತದೆ. ನೀನು ಆ ಜ್ಞಾನವನ್ನು ಪಡೆದಿರುತ್ತಿ. ನೀನು ಸತ್ಯಸಂಕಲ್ಪದಲ್ಲಿ ನಿಷ್ಠನಾಗಿರುವೆ. ನನಗೂ ಆಗಾಗ್ಗೆ ನಿನ್ನಂತಹ ಚರ್ಚಿಸುವವರನ್ನು ಸಂಧಿಸುತ್ತಿರಬೇಕೆಂದೆನಿಸುತ್ತದೆ. "

**ಜಾನಾಮ್ಯಹಂಶೇವಧಿರಿತ್ಯನಿತ್ಯಂ**
**ನ ಹ್ಯಧ್ರುವೈಃ ಪ್ರಾಪ್ಯತೇ ಹಿ ಧ್ರುವಂ ತತ್ ।**
**ತತೋ ಮಯಾ ನಾಚಿಕೇತಶ್ಚಿತೋಽಗ್ನಿ-**
**ರನಿತ್ಯೈರ್ದ್ರವ್ಯೈಃ ಪ್ರಾಪ್ತವಾನಸ್ಮಿನಿತ್ಯಂ ॥೧೦॥**

ನಚಿಕೇತನು ಹೇಳುತ್ತಾನೆ " ನಾನು ಸಂಪತ್ತು ಶಾಶ್ವತವಲ್ಲವೆಂಬುದನ್ನು ಬಲ್ಲೆ. ಶಾಶ್ವತವಲ್ಲದ ಯಾವ ಮಾರ್ಗಗಳಿಂದಲೂ ಧ್ರುವವಾದ ಆ ಪರಮಾತ್ಮನನ್ನು ಪಡೆಯಲಾಗುವುದಿಲ್ಲ. ಆದ್ದರಿಂದಲೇ ನಾನು ಅನಿತ್ಯವಾದ ದ್ರವ್ಯಗಳಿಂದ ನಾಚಿಕೇತಾಗ್ನಿಯನ್ನು ಚಯನ ಮಾಡಿದೆನು, ಅದರ ಫಲವಾಗಿ ಆ ಪರಮಾತ್ಮನನ್ನು ಗೆದ್ದೆ."

**ಕಾಮಸ್ಯಾಪ್ತಿಂ ಜಗತಃ ಪ್ರತಿಷ್ಠಾಂ**
**ಕ್ರತೋರಾನನ್ತ್ಯಮಭಯಸ್ಯ ಪಾರಂ ।**
**ಸ್ತೋಮಂ ಮಹದುರುಗಾಯಂ ಪ್ರತಿಷ್ಠಾಂ ದೃಷ್ಟ್ವಾ**
**ಧೃತ್ಯಾ ಧೀರೋ ನಚಿಕೇತೋಽತ್ಯಸ್ರಾಕ್ಷೀಃ ॥೧೧॥**

ಆಗ ಯಮನು ಹೇಳುತ್ತಾನೆ " ಓ ನಾಚಿಕೇತಾ. ನೀನು ಕಂಡುಕೊಂಡಿರುವ ದೃಢಚಿತ್ತದಂತೆ ಕಾಮನೆಗಳನ್ನು ಹೊಂದಿರುವುದು ಒಂದು ಕಡೆ; ಈ ಪ್ರಪಂಚದ ಭದ್ರವಾದ ಅಡಿಪಾಯ ಮತ್ತು ಒಂದು ಅನಂತಶಕ್ತಿ ಇನ್ನೊಂದು ಕಡೆ, ಪರಿಣಾಮವಾಗಿ ಭದ್ರತೆ ಮತ್ತು ಹೊಗಳುವಿಕೆಯ ಮೂಲಕ ಚಲಿಸುತ್ತಿರುವ ಶಕ್ತಿ ಇವುಗಳನ್ನು ಧೀರನಾಗಿ ಮತ್ತು ದೃಢವಾಗಿ ಉಪಯೋಗಿಸಿಕೊಂಡು ಎಲ್ಲ ಕಾಮನೆಗಳನ್ನೂ ಬಿಟ್ಟಿರುತ್ತೀಯೆ. "

**ತಂ ದುರ್ದರ್ಶಂ ಗೂಢಮನುಪ್ರವಿಷ್ಟಂ**
**ಗುಹಾಹಿತಂ ಗಹ್ವರೇಷ್ಠಂ ಪುರಾಣಂ ।**
**ಅಧ್ಯಾತ್ಮಯೋಗಾಧಿಗಮೇನ ದೇವಂ**
**ಮತ್ವಾ ಧೀರೋ ಹರ್ಷಶೋಕೌ ಜಹಾತಿ ॥೧೨॥**

" ಪೂರ್ವಕಾಲದ ಅನೇಕ ಮಹರ್ಷಿಗಳು ತಪೋನಿರತರಾಗಿದ್ದಾಗ್ಯೂ ಅಗೋಚರನಾದ ಆ ಪರಮಾತ್ಮನನ್ನು ಅಧ್ಯಾತ್ಮಯೋಗದ ಮೂಲಕ ಶರಣಾಗಿ ಆತನನ್ನು ಕಂಡುಕೊಂಡು ಆ ಪರಮಾತ್ಮನನ್ನು ತಮ್ಮ ಹೃದಯ ಗಹ್ವರದಲ್ಲಿ ನೆಲೆಗೊಳಿಸಿ. ಇಹಲೋಕದ ಸುಖ ದುಃಖಗಳನ್ನು ಕಳಚಿ ಕೊಂಡು ಪರಮಾತ್ಮಜ್ಞಾನವನ್ನು ಪಡೆದರು."

**ಏತಚ್ಛ್ರುತ್ವಾ ಸಂಪರಿಗೃಹ್ಯ ಮರ್ತ್ಯಃ**
**ಪ್ರವೃಹ್ಯಧರ್ಮ್ಯಮಣುಮೇತಮಾಪ್ಯ ।**
**ಸ ಮೋದತೇ ಮೋದನೀಯಂ ಹಿ ಲಬ್ಧ್ವಾ**
**ವಿವೃತಂಹಿ ಸದ್ಮ ನಚಿಕೇತಸಂ ಮನ್ಯೇ ॥೧೩॥**

" ನಶ್ವರನಾದ ಮನುಷ್ಯನೊಬ್ಬನು ಇವೆಲ್ಲವನ್ನೂ ಕೇಳಿದ್ದಾನೆ ; ಇವು ಗಳನ್ನು ದೃಢವಾಗಿ ಹಿಡಿದಿದ್ದಾನೆ ; ಅವನ ದೇಹದಲ್ಲಿದ್ದ ಆತ್ಮಬಲವನ್ನು ಹೊರಗೆ ತಳ್ಳಿ ಅತೀ ಸೂಕ್ಷ್ಮವಾದ ಬ್ರಹ್ಮವಿದ್ಯೆಯನ್ನು ಪಡೆದು ಸಂತೋಷಿ ಸುತ್ತಿರುವ ನಚಿಕೇತನನ್ನು ಕಂಡು ನಾನು ತೃಪ್ತನಾಗಿದ್ದೇನೆ. ಅವನಿಗೆ ಆವಾ ಸ್ತವ್ಯವು ಸಂಪೂರ್ಣವಾಗಿ ತೆರೆಯಲ್ಪಟ್ಟಿದೆ. "

**ಅನ್ಯತ್ರ ಧರ್ಮಾದನ್ಯತ್ರಾಧರ್ಮಾ-**
**ದನ್ಯತ್ರಾಸ್ಮಾತ್ಕೃತಾಕೃತಾತ್ ।**
**ಅನ್ಯತ್ರ ಭೂತಾಚ್ಚ ಭವ್ಯಾಚ್ಚ**
**ಯತ್ತತ್ಪಶ್ಯಸಿ ತದ್ವದ ॥೧೪॥**

ನಚಿಕೇತನು ಕೇಳುತ್ತಾನೆ " ಧರ್ಮದ ಮೂಲಕ ಮತ್ತು ಅಧರ್ಮದ ಮೂಲಕ ಕಾಣುವುದ್ಯಾವುದು ; ಸೃಷ್ಟಿಯಾದ ಭೂತಗಳ ಮೂಲಕ ಮತ್ತು ಸೃಷ್ಟಿಗೆ ಒಳಪಡದ ಭೂತಗಳ ಮೂಲಕ ಕಾಣುವುದಾವುದು ; ತಪಸ್ಸಿನ ಮೂಲಕ ಕಾಣುವುದ್ಯಾವುದು ; ಸ್ಥೂಲದೃಷ್ಟಿಯಿಂದ ಕಾಣುವುದ್ಯಾವುದು ? ಎಂಬುದನ್ನು ಹೇ ಯಮರಾಜ ನನಗೆ ತಿಳಿಯಹೇಳು."

**ಸರ್ವೇ ವೇದಾ ಯತ್ಪದಮಾಮನನ್ತಿ**
**ತಪಾಂಸಿ ಸರ್ವಾಣಿ ಚ ಯದ್ವದಂತಿ ।**
**ಯದಿಚ್ಛಂತೋ ಬ್ರಹ್ಮಚರ್ಯಂ ಚರನ್ತಿ**
**ತತ್ತೇ ಪದಂ ಸಂಗ್ರಹೇಣ ಬ್ರವೀಮ್ಯೋಮಿತ್ಯೇತತ**
**॥೧೫॥**

ಯಮನು ಹೇಳುತ್ತಾನೆ "ವೇದಗಳ ಸ್ಥಾನ, ಅವುಗಳ ಪರಿಣಾಮ ಇವುಗಳನ್ನು ಸಾಧಿಸಲು ಪಡೆಯಬೇಕಾಗಿರುವ ಕಠಿಣ ಕ್ರಮಗಳು, ಇದು ಸಿದ್ಧಿಗಾಗಿ ಜನಗಳು ನಡೆಸುತ್ತಿರುವ ಪವಿತ್ರ ಜೀವನ, ಇವುಗಳನ್ನು ಆವರಿಸಿ ಕೊಂಡಿರುವ ಒಂದು ಪವಿತ್ರ ಗುರಿ ಎಂದರೆ "ಓಂ" ಎಂಬ ಬೀಜಾಕ್ಷರವೊಂದೇ ನಚಿಕೇತಾ."

**ಏತದ್ಧ್ಯೇವಾಕ್ಷರಂ ಬ್ರಹ್ಮ ಏತದ್ಧ್ಯೇವಾಕ್ಷರಂ ಪರಂ ।**
**ಏತದ್ಧ್ಯೇವಾಕ್ಷರಂ ಜ್ಞಾತ್ವಾ ಯೋ ಯದಿಚ್ಛತಿ ತಸ್ಯ ತತ್ ॥೧೬॥**

"ಈ ಬೀಜಾಕ್ಷರವೇ ಬ್ರಹ್ಮ. ಈ ಬೀಜಾಕ್ಷರವೇ ಪರ. ಈ ಬೀಜಾಕ್ಷರವನ್ನು ತಿಳಿದುಕೊಂಡು ಯಾವನು ಯಾವುದನ್ನು ಬಯಸುತ್ತಾನೆಯೋ ಅವನಿಗೆ ಅದು ಲಭಿಸುತ್ತದೆ."

**ಏತದಾಲಂಬನಂ ಶ್ರೇಷ್ಠಮೇತದಾಲಂಬನಂ ಪರಂ ।**
**ಏತದಾಲಂಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ ॥೧೭॥**

"ಈ ಓಂಕಾರನಾದಕ್ಕೆ ಅರ್ಪಿಸಿಕೊಳ್ಳುವುದು ಶ್ರೇಷ್ಠ, ಈ ಓಂಕಾರನಾದಕ್ಕೆ ಆಲಂಬನೆ ಮಾಡುವುದು ಪರ. ಇಂತಹ ಆಲಂಬನೆಯಿಂದ ಮನುಷ್ಯರು ಉಚ್ಚ ಶ್ರೇಣಿಗೇರಿ ಬ್ರಹ್ಮಲೋಕದಲ್ಲಿ ಸ್ಥಾನವನ್ನು ಪಡೆಯುತ್ತಾರೆ."

**ನ ಜಾಯತೇ ಮ್ರಿಯತೇ ವಾ**
**ವಿಪಶ್ಚಿನ್ನ ಬಭೂವ ಕಶ್ಚಿತ್ ।**
**ಅಜೋ ನಿತ್ಯ ಶ್ಶಾಶ್ವತೋಽಯಂ ಪುರಾಣೋ**
**ನ ಹನ್ಯತೇ ಹನ್ಯಮಾನೇ ಶರೀರೇ ॥೧೮॥**

"ಬ್ರಹ್ಮಜ್ಞಾನವನ್ನು ಪಡೆದಿರುವವರಿಗೆ ಜನ್ಮಮೃತ್ಯುಗಳ ಭಯವಿರುವುದಿಲ್ಲ. ಅವನು ಎಲ್ಲಿಂದಲೂ ಬಂದವನಲ್ಲ ಯಾವನೂ ಅಲ್ಲ. ಅವನು ಜರಾರಹಿತನು, ಚಿರಂಜೀವಿಯು, ಅವನು ಪುರಾತನನು ಮತ್ತು ಪುರಾಣ ಪುರುಷನು. ದೇಹವು ಅಪಘಾತಕ್ಕೆ ಒಳಗಾದರೂ ಆವನಿಗೆ ಯಾವ ಚ್ಯುತಿಯೂ ಇರುವುದಿಲ್ಲ."

**ಹಂತಾ ಚೇನ್ಮನ್ಯತೇ ಹಂತುಂ ಹತಶ್ಚೇನ್ಮನ್ಯತೇಹತಂ ।**
**ಉಭೌ ತೌ ನ ವಿಜಾನೀತೋ ನಾಯಂ ಹಂತಿ ನ ಹನ್ಯತೇ ॥೧೯॥**

"ಕೊಲ್ಲುವವನು ತಾನು ಕೊಲ್ಲುತ್ತೇನೆಂದರೆ ಕೊಲ್ಲಲ್ಪಟ್ಟವನು ತಾನು ಕೊಲ್ಲಲ್ಪಟ್ಟವನೆಂದು ಹೇಳಿದರೆ ಇಬ್ಬರೂ ಅಜ್ಞಾನಿಗಳೆಂದೆನ್ನಬಹುದು. ಕೊಲ್ಲುವವನೂ ಅವನಲ್ಲ, ಕೊಲ್ಲಲ್ಪಡುವವನೂ ಆವನಲ್ಲ."

**ಅಣೋರಣೀಯಾನ್ ಮಹತೋ ಮಹೀಯಾನ್**
**ಆತ್ಮಾಸ್ಯ ಜಂತೋರ್ನಿಹಿತೋ ಗುಹಾಯಾಂ ।**
**ತಮಕ್ರತುಃ ಪಶ್ಯತಿ ವೀತಶೋಕೋ**
**ಧಾತುಃ ಪ್ರಸಾದಾನ್ಮಹಿಮಾನಮಾತ್ಮನಃ ॥೨೦॥**

"ಅಣುವಿಗಿಂತ ಆಣುವಾದ ಮಹತ್ತಿಗಿಂತ ಮಹತ್ತಾದ ಈ ಜೀವವನ್ನು ಪ್ರವೇಶಿಸಿ ಆಳುತ್ತಿರುವ ಆತ್ಮನು ಹೃದಯಗುಹೆಯಲ್ಲಿ ಸ್ಥಿತನಾಗಿರುತ್ತಾನೆ. ಕಾಮ್ಯ ಕರ್ಮರಹಿತನಾದ ಧಾರಕನಾದ ಅವನು ಪರಮಾತ್ಮನ ಅನುಗ್ರಹದಿಂದ ಅಂತಹ ಪರಮಾತ್ಮನ ಮಹಿಮೆಯನ್ನು ಯಾವಾಗ ಕಂಡು ಕೊಳ್ಳುತ್ತಾನೋ ಆವಾಗ ಶೋಕವಿಲ್ಲದವನಾಗುವನು."

**ಆಸೀನೋ ದೂರಂ ವ್ರಜತಿ ಶಯಾನೋಯಾತಿಸರ್ವತಃ ।**
**ಕಸ್ತಂ ಮದಾಮದಂ ದೇವಂ ಮದನ್ಯೋ ಜ್ಞಾತುಮರ್ಹತಿ ॥೨೧॥**

"ಅವನು ಒಂದುಕಡೆ ಕುಳಿತಿದ್ದೇ ದೂರದ ಪ್ರಯಾಣ ಮಾಡುತ್ತಾನೆ. ಮಲಗಿದ್ದೇ ಎಲ್ಲೆಂದರೆ ಅಲ್ಲಿಗೆ ಹೋಗುತ್ತಾನೆ. ಹರ್ಷಾಹರ್ಷ ವಿರುದ್ಧ

ಗುಣಗಳಿರುವ ಆ ಪರಮಾತ್ಮನನ್ನು ನನಗಿಂತ ಬೇರೆ ಯಾವನು ತಿಳಿಯ ಬಲ್ಲನು "

**ಅಶರೀರಂ ಶರೀರೇಷ್ವನವಸ್ಥೇಷ್ವವಸ್ಥಿತಂ ।**
**ಮಹಾನ್ತಂ ವಿಭುಮಾತ್ಮಾನಂ ಮತ್ವಾಧೀರೋ ನಶೋಚತಿ ॥೨೨॥**

"ಶರೀರದಲ್ಲಿ ಶರೀರವಿಲ್ಲವೆಂಬುದನ್ನರಿತು ಒಂದು ವ್ಯವಸ್ಥೆಯಲ್ಲಿ ಅವ್ಯವಸ್ಥೆಯನ್ನರಿತು ನೆಲಸಿರುವ ಮಹಾ ವೈಭವಶಾಲಿಯಾದ ಆ ಆತ್ಮನನ್ನು ತಿಳಿದುಕೊಂಡವನು ಧೀರನಾದವನು. ಅವನಿಗೆ ಯಾವ ಶೋಕವೂ ಇರುವುದಿಲ್ಲ."

**ನಾಯಮಾತ್ಮಾ ಪ್ರವಚನೇನ ಲಭ್ಯೋ**
**ನ ಮೇಧಯಾ ನ ಬಹುನಾ ಶ್ರುತೇನ ।**
**ಯಮೇವೈಷ ವೃಣುತೇ ತೇನ ಲಭ್ಯಸ್ತಸ್ಯೈಷ**
**ಆತ್ಮಾ ವಿವೃಣುತೇ ತನೂಂ ಸ್ವಾಂ ॥೨೩॥**

"ಆತ್ಮವು ಯಾವ ಶಕ್ತಿಶಾಲಿ ವಿದ್ಯೆಗೂ ಜಯಿಸಲ್ಪಡುವುದಿಲ್ಲ. ಬುದ್ಧಿಶಕ್ತಿಯೂ ಬೃಹದ್ವಿದ್ಯೆಯೂ ಅವನನ್ನು ಗೆಲ್ಲಲಾಗುವುದಿಲ್ಲ. ಆದರೆ ಯಾರನ್ನು ಆತ್ಮವು ತಾನೇ ಆರಿಸುತ್ತೋ ಅವನಿಂದ ಗೆಲ್ಲಲ್ಪಡುತ್ತದೆ ಮತ್ತು ಅವನ ದೇಹವನ್ನು ಧರಿಸಿಕೊಳ್ಳುತ್ತದೆ."

**ನಾವಿರತೋ ದುಶ್ಚರಿತಾನ್ನಾಶಾಂತೋ ನಾಸಮಾಹಿತಃ ।**
**ನಾಶಾಂತಮಾನಸೋ ವಾಪಿಪ್ರಜ್ಞಾನೇನೈವಮಾಪ್ನುಯಾತ್ ॥೨೪॥**

"ದುಷ್ಕಾರ್ಯಗಳನ್ನು ಮಾಡುವುದನ್ನು ನಿಲ್ಲಿಸದ, ಸಮಬುದ್ಧಿಯಲ್ಲಿಲ್ಲದ, ತನ್ನ ಇರುವಿಕೆಯಲ್ಲಿ ಶಾಂತತೆ ಇಲ್ಲದ ಮತ್ತು ಪರಿಶುದ್ಧವಾದ ಮನಸ್ಸಿಲ್ಲದ ಯಾರುತಾನೆ ಯಾವ ನೈತಿಕ ಬಲದಿಂದ ಆ ಪರಮಾತ್ಮನನ್ನು ಸೇರಬಲ್ಲರು."

**ಯಸ್ಯಬ್ರಹ್ಮಚ ಕ್ಷತ್ರಂಚ ಉಭೇ ಭವತು ಓದನಃ ।**
**ಮೃತ್ಯುರ್ಯಸ್ಯೋಪಸೇಚನಂ ಕ ಇತ್ಥಾವೇದಯತ್ರಸಃ ॥೨೫॥**

"ಯಾರಿಗೆ ಬ್ರಾಹ್ಮಣರೂ ಕ್ಷತ್ರಿಯರೂ ತಿನ್ನುವ ಆಹಾರವಾಗಿರುವರೋ, ಮೃತ್ಯುವೆಂಬುವುದು ರಸೋಪಚಾರವಾಗಿದೆಯೋ ಅಂತಹವನನ್ನು ಯಾರುತಾನೆ ಕಂಡುಕೊಳ್ಳಲು ಸಾಧ್ಯ ? ಮತ್ತು ಎಲ್ಲಿ ವಾಸಿಸುವನೆಂದು ಅರಿತುಕೊಳ್ಳಲು ಸಾಧ್ಯ ? "

## ಅಧ್ಯಾಯ ೧—ವಲ್ಲಿ ೩

**ಋತಂ ಪಿಬಂತೌ ಸುಕೃತಸ್ಯ ಲೋಕೇ ಗುಹಾಂ ಪ್ರವಿಷ್ಟೌ**
**ಪರಮೇ ಪರಾರ್ಧೇ ।**
**ಛಾಯಾತಪೌ ಬ್ರಹ್ಮವಿದೋವದಂತಿ ಪಂಚಾಗ್ನಯೋ**
**ಯೇ ಚ ತ್ರಿಣಾಚಿಕೇತಾಃ ॥೧॥**

" ಯಮನು ಹೇಳುತ್ತಾನೆ, ಋತುವನ್ನು ಅನುಭವಿಸುತ್ತಿರುವ ಮತ್ತು ಸುಕೃತಸಾಧ್ಯವಾದ ಈ ಲೋಕದಲ್ಲಿ ಅತ್ಯಂತ ಉತ್ಕೃಷ್ಟವಾದ ಹೃದಯಾಕಾಶವನ್ನು ಪ್ರವೇಶಿಸಿರುವ ಇವರಿಬ್ಬರನ್ನೂ ನೆರಳು ಬಿಸಿಲುಗಳೆಂದು ಮೂರು ಅನುವಾಕಗಳನ್ನು ಅಧ್ಯಯನಮಾಡಿರುವವರೂ, ಪಂಚಾಗ್ನಿಯ ಮೂಲಕ ಶುದ್ಧಾಂತಃಕರಣವನ್ನು ಹೊಂದಿರುವ ಬ್ರಹ್ಮಜ್ಞಾನಿಗಳೂ ಹೇಳುತ್ತಾರೆ. "

**ಯಃಸೇತುರೀಜಾನಾನಾಮಕ್ಷರಂ ಬ್ರಹ್ಮಯತ್ಪರಂ ।**
**ಅಭಯಂ ತಿತೀರ್ಷತಾಂ ಪಾರಂ ನಾಚಿಕೇತಂ ಶಕೇಮಹಿ ॥೨॥**

ಯಾವುದು ಯಜ್ಞಮಾಡುವವರಿಗೆ ಸೇತುವೆಯಂತಿರುವುದೋ, ಯಾವ ಅಕ್ಷರವು ಪರಬ್ರಹ್ಮವೋ, ಯಾವುದು ದಾಟಲಿಚ್ಛಿಸುವವರಿಗೆ ಭಯವಿಲ್ಲದ ದಡವಾಗಿರುವುದೋ, ಯಾವುದನ್ನು ನಾಚಿಕೇತಾಗ್ನಿಯಿಂದ ಹೊಂದಬಹುದೋ ಅದನ್ನು ಉಪಾಸನೆಮಾಡಲು ಶಕ್ತರಾಗಿರುವೆವು.

**ಆತ್ಮಾನಂ ರಥಿನಂ ವಿದ್ಧಿ ಶರೀರಂ ರಥಮೇವತು ।**
**ಬುದ್ಧಿಂತು ಸಾರಥಿಂ ವಿದ್ಧಿ ಮನಃಪ್ರಗ್ರೆಹಮೇವಚ ॥೩॥**

ಈ ದೇಹವು ಒಂದು ರಥವೆಂದು ತಿಳಿ. ಆತ್ಮವನ್ನು ರಥಿಕನೆಂದು ತಿ ಬುದ್ಧಿಯನ್ನು ಸಾರಥಿಯೆಂದು ತಿಳಿ, ಮನಸ್ಸನ್ನು ಕಡಿವಾಣವೆಂದೂ ತಿಳಿ.

**ಇಂದ್ರಿಯಾಣಿ ಹಯಾನ್ಯಾಹು ರ್ವಿಷಯಾಂಸ್ತೇಷು ಗೋಚರಾನ್**
**ಆತ್ಮೇಂದ್ರಿಯ ಮನೋಯುಕ್ತಂ ಭೋಕ್ತೇತ್ಯಾಹುರ್ಮನೀಷಿಣಃ ॥೪॥**

ಇಂದ್ರಿಯಗಳನ್ನು ರಥಕ್ಕೆ ಕಟ್ಟಿರುವ ಕುದುರೆಗಳೆಂದು ತಿಳಿ. ವಿಷಯ ಗಳನ್ನು ರಥವು ಸಂಚರಿಸುವ ಮಾರ್ಗವೆಂದು ತಿಳಿ. ಯಾರು ಆತ್ಮ ಇಂದ್ರಿಯ ಮತ್ತು ಮನಸ್ಸು ಇವುಗಳಿಂದ ಏಕೀಭೂತರಾಗಿರುತ್ತಾರೋ ಅವನನ್ನು ಭೋಕ್ತೃವೆಂದು ವಿವೇಕಿಗಳು ಹೇಳುತ್ತಾರೆ.

**ಯಸ್ತ್ವವಿಜ್ಞಾನವಾನ್ ಭವತ್ಯಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣ್ಯವಶ್ಯಾನಿ ದುಷ್ಟಾಶ್ವಾ ಇವ ಸಾರಥೇಃ ॥೫॥**

ಯಾರು ತಮ್ಮ ಮನಸ್ಸನ್ನು ವಿಜ್ಞಾನದ ಕಡೆಗೆ ಹರಿಸದೆ ತನ್ನ ಇಂದ್ರಿ ಯಗಳು ಹೋದ ಮಾರ್ಗದಲ್ಲಿ ಗಮಿಸುವರೋ, ಅವರು ರಥಕ್ಕೆ ತುಂಟು ಕುದುರೆಗಳನ್ನು ಕಟ್ಟಿಕೊಂಡವರಂತಾಗಿ ಮನಸೋ ಇಚ್ಛೆಯಿಂದ ಗಮಿಸುವವ ರಾಗಿರುತ್ತಾರೆ.

**ಯಸ್ತು ವಿಜ್ಞಾನವಾನ್ಭವತ್ಯಯುಕ್ತೇನ ಮನಸಾ ಸದಾ ।**
**ತಸ್ಯೇಂದ್ರಿಯಾಣಿ ವಶ್ಯಾನಿ ಸದಶ್ವಾ ಇವಸಾರಥೇಃ ॥೬॥**

ಯಾರು ಯಾವಾಗಲೂ ತಮ್ಮ ಮನಸ್ಸನ್ನು ವಿಜ್ಞಾನದ ಕಡೆಗೆ ಹರಿಸಿ ತಮ್ಮ ಇಂದ್ರಿಯಗಳನ್ನು ತಮ್ಮ ವಶದಲ್ಲಿಟ್ಟುಕೊಳ್ಳುವರೋ ಅವರು ರಥಕ್ಕೆ ಒಳ್ಳೆಯ ಕುದುರೆಗಳನ್ನು ಕಟ್ಟಿಕೊಂಡು ಸತ್ಪಥದಲ್ಲಿ ಗಮಿಸುವರಾಗುತ್ತಾರೆ.

**ಯಸ್ತ್ವವಿಜ್ಞಾನವಾನ್ ಭವತ್ಯಮನಸ್ಕಸ್ಸದಾಶುಚಿಃ I**
**ನಸತತ್ಪದಮವಾಪ್ನೋತಿ ಸಂಸಾರಂ ಚಾಧಿಗಚ್ಛತಿ ||೭||**

ಯಾರು ವಿಜ್ಞಾನವನ್ನು ಅರಿಯದವರಾಗಿಯೂ ಯಾವಾಗಲೂ ವಿಮನಸ್ಕರಾಗಿಯೂ, ಅಶುಚಿಗಳಾಗಿಯೂ ಇರುವರೋ ಅವರು ಭಗವಂತನ ಪಾದಾರವಿಂದವನ್ನು ಸೇರಲಾರರು. ಸಂಸಾರದ ಚಕ್ರಗಳಿಗೆ ಸಿಕ್ಕಿ ತೊಳಲಾಡುತ್ತಾರೆ.

**ಯಸ್ತು ವಿಜ್ಞಾನವಾನ್ ಭವತಿ ಸಮನಸ್ಕಸ್ಸದಾ ಶುಚಿಃ I**
**ಸತು ತತ್ಪದಮವಾಪ್ನೋತಿ ಯಸ್ಮಾದ್ಭೂಯೋ ನಜಾಯತೇ ||೮||**

ಯಾರು ವಿಜ್ಞಾನವನ್ನು ಬಲ್ಲವರಾಗಿದ್ದು ಸಮನಸ್ಕರಾಗಿರುವರೋ ಯಾರು ಯಾವಾಗಲೂ ಶುಚಿಯಾಗಿರುವರೋ, ಅವರು ಅಮರರಾಗಿ ಪರಮಪದವನ್ನು ಹೊಂದುತ್ತಾರೆ.

**ವಿಜ್ಞಾನಸಾರಥಿರ್ಯಸ್ತು ಮನಃಪ್ರಗ್ರಹವಾನ್ ನರಃ I**
**ಸೋಽಧ್ವನಃ ಪಾರಮಾಪ್ನೋತಿ ತದ್ವಿಷ್ಣೋಃ ಪರಮಂ ಪದಂ ||೯||**

ಯಾರು ವಿಜ್ಞಾನವನ್ನು ಸಾರಥಿಯಾಗಿ ಮಾಡಿಕೊಂಡು ಮನಸ್ಸೆಂಬ ಕಡಿವಾಣವನ್ನು ಹೊಂದಿರುವನೋ ಅವನು ಸಂಸಾರಗತಿಯ ಕೊನೆಯಾದ ಆ ವಿಷ್ಣುವಿನ ಪರಮಪದವನ್ನು ಹೊಂದುತ್ತಾನೆ.

**ಇಂದ್ರಿಯೇಭ್ಯಃ ಪರಾಹ್ಯರ್ಥಾಃ ಅರ್ಥೇಭ್ಯಶ್ಚ ಪರಂ ಮನಃ I**
**ಮನಸಸ್ತು ಪರಾಬುದ್ಧಿ ರ್ಬುದ್ಧೇರಾತ್ಮಾ ಮಹಾನ್ ಪರಃ ||೧೦||**

ಇಂದ್ರಿಯಗಳಿಗಿಂತ ವಿವೇಕಶಕ್ತಿಯು ಹೆಚ್ಚಿನದು. ವಿವೇಕಶಕ್ತಿಗಿಂತ ಮನಸ್ಸು ಹೆಚ್ಚಿನದು. ಮನಸ್ಸಿಗಿಂತ ಬುದ್ಧಿಯು ಹೆಚ್ಚು, ಬುದ್ಧಿಗಿಂತ ಆತ್ಮವು ಬಹಳ ಹೆಚ್ಚು.

**ಮಹತಃ ಪರಮವ್ಯಕ್ತಾ ಮವ್ಯಕ್ತಾತ್ ಪುರುಷಃ ಪರಃ ।**
**ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾ ಸಾ ಪರಾಗತಿಃ ॥೧೧॥**

ಆತ್ಮಕ್ಕಿಂತ ಪರಮವ್ಯಕ್ತಿಯು ಹೆಚ್ಚು. ಪರಮವ್ಯಕ್ತಿಗಿಂತ ಪುರುಷನು ಹೆಚ್ಚು. ಈ ಪುರುಷನಿಗಿಂತ ಹೆಚ್ಚಾದವರು ಯಾರೂ ಇಲ್ಲ. ಅವನೇ ಅಂತಿಮರೂಪ. ಅವನೇ ಪ್ರಯಾಣದ ಕಡೆಯಗುರಿ.

**ಏಷು ಸರ್ವೇಷು ಭೂತೇಷು ಗೂಢೋಽಽತ್ಮಾನ ಪ್ರಕಾಶತೇ ।**
**ದೃಶ್ಯತೇತ್ವಗ್ರ್ಯಯಾ ಬುದ್ಧ್ಯಾ ಸೂಕ್ಷ್ಮಯಾಸೂಕ್ಷ್ಮದರ್ಶಿಭಿಃ**
**॥೧೨॥**

ಆವನು ಸಕಲ ಭೂತಗಳಲ್ಲೂ ಗೂಢಾತ್ಮನಾಗಿದ್ದು ಸ್ವಯಂಜ್ಯೋತಿಸ್ವರೂಪನಾಗಿದ್ದಾನೆ. ಅವನು ಯಾರಿಗೂ ಗೋಚರನಲ್ಲ. ಆದರೂ ಸೂಕ್ಷ್ಮಾತಿಸೂಕ್ಷ್ಮರಾದ ಮತ್ತು ದಿವ್ಯಜ್ಞಾನಿಗಳಾದ ಕೆಲವರಿಗೆ ಮಾತ್ರ ಆತನು ಗೋಚರನಾಗಿದ್ದಾನೆ.

**ಯಚ್ಛೇದ್ವಾಙ್ಮನಸೀ ಪ್ರಾಜ್ಞಸ್ತದ್ಯಚ್ಛೇದ್ ಜ್ಞಾನ ಆತ್ಮನಿ ।**
**ಜ್ಞಾನಮಾತ್ಮನಿ ಮಹತಿ ನಿಯಚ್ಛೇತ್ತದ್ಯಚ್ಛೇಚ್ಛಾಂತ ಆತ್ಮನಿ**
**॥೧೩॥**

ಬುದ್ಧಿವಂತನಾದ ಮನುಷ್ಯನು ಮಾತುಗಳನ್ನು ತನ್ನ ಮನಸ್ಸಿಗೆ ಅಂಕಿತಗೊಳಿಸಲಿ; ಮನಸ್ಸು ಆತ್ಮಕ್ಕೆ ಅಂಕಿತವಾಗಲಿ; ಬುದ್ಧಿಯು ಆ ಪರಾತ್ಪರನಲ್ಲಿ ಅಂಕಿತಗೊಳ್ಳಲಿ. ಅದನ್ನು ಪುನಃ ಶಾಂತನಾಗಿರುವ ಆತ್ಮನ ಅಂಕಿತವಲ್ಲಿರಿಸಲಿ.

**ಉತ್ತಿಷ್ಠತ ಜಾಗ್ರತ ಪ್ರಾಪ್ಯವರಾನ್ನಿಬೋಧತ ।**
**ಕ್ಷುರಸ್ಯಧಾರಾ ನಿಶಿತಾ ದುರತ್ಯಯಾ ದುರ್ಗಂ ಪಥಸ್ತತ್**
**ಕವಯೋ ವದಂತಿ ॥೧೪॥**

ಮೇಲಕ್ಕೇಳು. ಎಚ್ಚರವಾಗು, ಮಹತ್ತಾದುವುಗಳನ್ನು ಕಂಡುಹಿಡಿ, ಅವುಗಳನ್ನು ಕಲಿತುಕೋ, ಕತ್ತಿಯ ಅಲಗು ಹರಿತವಾಗಿದ್ದು ಅದರಮೇಲೆ ನಡೆಯಲು ಸಾಧ್ಯವಿಲ್ಲದಹಾಗೆ ಆ ದಾರಿಯು ಪ್ರಯಾಣಕ್ಕೆ ಕಷ್ಟಕರವಾಗಿದೆ ಯೆಂದು ಜ್ಞಾನಿಗಳು ಹೇಳುತ್ತಾರೆ.

**ಅಶಬ್ದಮಸ್ಪರ್ಶಮರೂಪಮವ್ಯಯಂ ತಥಾऽರಸಂ**
**ನಿತ್ಯಮಗಂಧವಚ್ಚ ಯತ್ ।**
**ಅನಾದ್ಯನಂತಂ ಮಹತಃ ಪರಂ ಧ್ರುವಂ ನಿಚಾಯ್ಯತಂ**
**ಮೃತ್ಯುಮುಖಾತ್ ಪ್ರಮುಚ್ಯತೇ ॥೧೫॥**

ಯಾವುದರಲ್ಲಿ ಶಬ್ದವು ಬರುವುದಿಲ್ಲವೋ, ಸ್ಪರ್ಶತ್ವವಿಲ್ಲವೋ, ಆಕಾರ ವಿಲ್ಲವೋ, ಅಣುವಿನಲ್ಲಿ ಅಣುವೋ, ರುಚಿ ಕಾಣದೋ, ವಾಸನೆಯೂ ಇಲ್ಲವೋ, ಯಾವುದು ಸ್ಥಾಯಿಯಾಗಿದೆಯೋ, ಯಾವುದಕ್ಕೆ ಆದಿ ಅಂತ್ಯಗಳಿಲ್ಲವೋ ಯಾರು ಪರಮಾತ್ಮನಿಗಿಂತ ದೊಡ್ಡವರೋ, ಯಾರು ಅಚಲರಾಗಿರುವರೋ ಅವರನ್ನು ಅರಿತವರು ಮೃತ್ಯುಮುಖದಿಂದ ದೂರ ವಾಗುತ್ತಾರೆ.

**ನಾಚಿಕೇತಮುಪಾಖ್ಯಾನಂ ಮೃತ್ಯುಪ್ರೋಕ್ತಂ ಸನಾತನಂ ।**
**ಉಕ್ತ್ವಾಶ್ರುತ್ವಾಚ ಮೇಧಾವೀ ಬ್ರಹ್ಮಲೋಕಮಹೀಯತೇ ॥೧೬॥**

ಸನಾತನವಾದ ಮೃತ್ಯುಮುಖದಿಂದ ಹೇಳಲ್ಪಟ್ಟಿರುವ ಈ ನಚಿಕೇತನ ಉಪಾಖ್ಯಾನವನ್ನು ಹೇಳುವ ಮತ್ತು ಕೇಳುವ ಬುದ್ಧಿವಂತರು ಬ್ರಹ್ಮಲೋಕ ವನ್ನು ಸೇರಿ ಪ್ರಸಿದ್ಧರಾಗುತ್ತಾರೆ.

**ಸ ಇಮಂ ಪರಮಂ ಗುಹ್ಯಂ ಶ್ರಾವಯೇದ್ ಬ್ರಹ್ಮಸಂಸದಿ ।**
**ಪ್ರಯತಃ ಶ್ರಾದ್ಧಕಾಲೇವಾ ತದಾನಂತ್ಯಾಯ ಕಲ್ಪತೇ**
**ತದಾನಂತ್ಯಾಯ ಕಲ್ಪತೇ ॥೧೭॥**

ಪರಮ ರಹಸ್ಯವಾದ ಈ ನಚಿಕೇತ ಉಪಾಖ್ಯಾನವನ್ನು ಯಾರು ಭಕ್ತಿ ಶ್ರದ್ಧೆಯಿಂದ ತಾವು ಆಚರಿಸುವ ಪಿತೃಕಾರ್ಯಗಳ ಕಾಲದಲ್ಲಿ ಬ್ರಾಹ್ಮಣರ

ಸಮ್ಮುಖದಲ್ಲಿ ಶ್ರವಣಮಾಡುತ್ತಾರೋ ಅವರಿಗೆ ಅದು ಅನಂತ ಫಲವನ್ನು ಕೊಡಲು ಸಮರ್ಥವಾಗುತ್ತದೆ. ಅದು ಅನಂತಫಲವನ್ನು ಕೊಡಲು ಸಮರ್ಥ ವಾಗುತ್ತದೆ.

ಅಧ್ಯಾಯ ೨—ವಲ್ಲಿ ೪

**ಪರಾಂಚಿಖಾನಿ ವ್ಯತೃಣತ್ ಸ್ವಯಂಭೂಃ ತಸ್ಮಾತ್**
**ಪರಾಙ್‌ಪಶ್ಯತಿ ನಾಂತರಾತ್ಮನ್ ।**
**ಕಶ್ಚಿದ್ಧೀರಃ ಪ್ರತ್ಯಗಾತ್ಮಾನಮೈಕ್ಷದಾವೃತ್ತಚಕ್ಷು**
**ರಮೃತತ್ವಮಿಚ್ಛನ್ ॥೧॥**

ಯಮನು ಹೇಳುತ್ತಾನೆ, "ಸ್ವಯಂಭುವಾದ ಬ್ರಹ್ಮನು ಜೀವಿಯ ದೇಹದ ಬಾಗಿಲುಗಳನ್ನು ಹೊರಮುಖವಾಗಿ ಸೃಷ್ಟಿಸಿದ್ದಾನೆ. ಆದ್ದರಿಂದ ಮಾನವರು ಹೊರಗಡೆಯೇ ನೋಡುತ್ತಿರುತ್ತಾರೆ. ದೇಹದ ಒಳಗಲ್ಲ. ಎಲ್ಲೋ ಕೆಲವರು ಬುದ್ಧಿವಂತರು ಅಮರತ್ವವನ್ನು ಅಪೇಕ್ಷಿಸಿ ಅವರ ಕಣ್ಣು ಗಳನ್ನು ದೇಹದ ಒಳಗೆ ಹರಿಸಿ ಅಲ್ಲಿರುವ ಪರಮಾತ್ಮನನ್ನು ದೃಷ್ಟಿಸುತ್ತಾರೆ."

**ಪರಾಚಃ ಕಾಮಾನನುಯಂತಿಬಾಲಾಃ ತೇ ಮೃತ್ಯೋ**
**ರ್ಯಂತಿ ವಿತತಸ್ಯ ಪಾಶಂ ।**
**ಅಥ ಧೀರಾ ಅಮೃತತ್ವಂ ವಿದಿತ್ವಾ ಧ್ರುವಮಧ್ರುವೇಷ್ವಿಹ**
**ನ ಪ್ರಾರ್ಥಯಂತೇ ॥೨॥**

ಇಹ ಪ್ರಪಂಚದ ಆಶೆ ಮತ್ತು ಆನಂದವನ್ನು ಹಿಂಬಾಲಿಸಿ ಹುಡುಗತನ ದಿಂದ ದೊಡ್ಡದಾಗಿ ತೆರೆದ ಬಾಗಿಲಿರುವ ಯಮನ ಆಶ್ರಯಕ್ಕೆ ಹೋಗು ತ್ತಾರೆ. ಆದರೆ ಶಾಂತಚಿತ್ತರೂ ಅಮರತ್ವವನ್ನು ತಿಳಿದ ಜ್ಞಾನಿಗಳೂ ಈ ಪ್ರಪಂಚದ ವಿಷಯಭೋಗಗಳ ಕಡೆ ಮನಸ್ಸು ಕೊಡದೆ ಮುಂದೆ ತೆರ ಳುತ್ತಾರೆ,

**ಯೇನರೂಪಂ ರಸಂ ಗಂಧಂ ಶಬ್ದಾನ್ ಸ್ಪರ್ಶಾಂಶ್ಚಮೈಥುನಾನ್ ।**
**ಏತೇನೈವ ವಿಜಾನಾತಿ ಕಿಮತ್ರ ಪರಿಶಿಷ್ಯತೇ ॥ ಏತದ್ವೈತತ್ ॥೩॥**

ಆತ್ಮನು ತನ್ನ ಶರೀರಕ್ಕೆ ಸಂಬಂಧಿಸಿದ ರೂಪ, ರಸ, ಗಂಧ, ಸ್ಪರ್ಶ, ಶಬ್ದ, ಸಂಭೋಗ ಇವೆಲ್ಲವನ್ನೂ ಅರಿತುಕೊಂಡಿರುತ್ತಾನೆ. ಈ ಪ್ರಪಂಚದಲ್ಲಿ ಅವನು ಅರಿಯದಿರುವ ಯಾವ ವಿಷಯಗಳೂ ಇರುವುದಿಲ್ಲ. ಇದೇ ನೀನು ಹುಡುಕುತ್ತಿರುವ ಅದು. "

**ಸ್ವಪ್ನಾಂತಂ ಜಾಗರಿತಾಂತಂ ಚೋಭೌ ಯೇನಾನುಪಶ್ಯತಿ ।**
**ಮಹಾಂತಂ ವಿಭುಮಾತ್ಮಾನಂ ಮತ್ವಾ ಧೀರೋ ನ ಶೋಚತಿ ॥೪॥**

" ಶಾಂತನಾದ ಆತ್ಮವು ಪರಮಾತ್ಮನ ಇರುವಿಕೆಯನ್ನು ಅರಿತುಕೊಂಡು ತನ್ನ ವಿಶಿಷ್ಟ ಶಕ್ತಿಯ ಮೂಲಕ ಸ್ವಪ್ನಾವಸ್ಥೆಯ ಆಚೆ ಏನಿದೆ, ಜಾಗರಿತಾವಸ್ಥೆಯ ಅಂತ್ಯವಾವುದು ಎಂಬುದನ್ನು ಅರಿತುಕೊಂಡು ಯಾವ ಪಶ್ಚಾತ್ತಾಪವನ್ನೂ ಪಡುವುದಿಲ್ಲ.

**ಯ ಇಮಂ ಮಧ್ವದಂ ವೇದ ಆತ್ಮಾನಂ ಜೀವಮಂತಿಕಾತ್ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಏತದ್ವೈತತ್ ॥೫॥**

ಯಾವನು ಕರ್ಮಫಲವನ್ನು ಅನುಭವಿಸುವ ಜೀವಾತ್ಮನನ್ನೂ ಮತ್ತು ಆವನ ಸಮೀಪದಲ್ಲಿರುವ ಭೂತ ಭವಿಷ್ಯಗಳ ಒಡೆಯನನ್ನೂ ತಿಳಿಯುತ್ತಾನೆಯೋ ಅವನು ದುಷ್ಕೃತ್ಯಗಳನ್ನು ಮಾಡುವವನಾದರೂ ನಿಂದಿಸಕೂಡದು. ಇದೇ ನೀನು ಹುಡುಕುತ್ತಿರುವ ಅದು.

**ಯಃ ಪೂರ್ವಂ ತಪಸೋಜಾತ ಮದ್ಭ್ಯಃ ಪೂರ್ವಮಜಾಯತ ।**
**ಗುಹಾಂ ಪ್ರವಿಶ್ಯ ತಿಷ್ಠಂತಂ ಯೋ ಭೂತೇಭಿರ್ವ್ಯಪಶ್ಯತ ॥**
**ಏತದ್ವೈತತ್ ॥೬॥**

ಪ್ರಪಂಚವೆಲ್ಲ ವೂ ಜಲಮಯವಾಗಿದ್ದು ಸರ್ವಶೂನ್ಯವಾಗಿದ್ದ ಕಾಲದಲ್ಲಿ ಆವಿರ್ಭವಿಸಿದ ಆ ಪರಮಾತ್ಮನು ಸರ್ವರ ಹೃದಯಗುಹೆಯನ್ನು ಪ್ರವೇಶಿಸಿ ದೇಹೇಂದ್ರಿಯಗಳಿಂದ ಕೂಡಿದ ಭೂತಗಳೊಂದಿಗೆ ಇರುವ ಚತುರ್ಮುಖ ಬ್ರಹ್ಮನನ್ನು ನೋಡಿದನು. ಇದೇ ನೀನು ಹುಡುಕುತ್ತಿರುವ ಅದು.

**ಯಾ ಪ್ರಾಣೇನ ಸಂಭವತ್ಯದಿತಿರ್ದೇವತಾಮಯೀ ।**
**ಗುಹಾಂ ಪ್ರವಿಶ್ಯ ತಿಷ್ಠಂತೀಂ ಯಾ ಭೂತೇಭಿರ್ವ್ಯಜಾಯತ ॥**
**ಏತದ್ವೈತತ್ ॥೭॥**

ಅವನು ಪ್ರಾಣಗಳೊಂದಿಗೆ ಇರುವ ಕರ್ಮಫಲವನ್ನು ತಿನ್ನುವ ಅದಿತಿ. ಇಂದ್ರಿಯಗಳನ್ನವಲಂಬಿಸಿ ಭೋಗವನ್ನು ಪಡಯುತ್ತಾನೆ. ಹೃದಯ ಗುಹೆಯಲ್ಲಿ ಪ್ರವೇಶಿಸಿರುವನು. ಪೃಥಿವ್ಯಾದಿಭೂತಗಳೊಂದಿಗೆ ದೇವಾದಿ ರೂಪಗಳಿಂದ ಹುಟ್ಟುತ್ತಾನೆ, ಇದೇ ನೀನು ಹುಡುಕುತ್ತಿರುವ ಅದು.

**ಅರಣ್ಯೋರ್ನಿಹಿತೋ ಜಾತವೇದಾ ಗರ್ಭ ಇವ ಸುಭೃತೋ ಗರ್ಭಿಣೀಭಿಃ ।**
**ದಿವೇದಿವ ಈಡ್ಯೋ ಜಾಗೃವದ್ಭಿರ್ಹವಿಷ್ಮದ್ಭಿರ್ಮನುಷ್ಯೇಭಿರಗ್ನಿಃ ॥**
**ಎತದ್ವೈತತ್ ॥೮॥**

ಯಾವ ರೀತಿ ಹೆಂಗಸು ತನ್ನ ಗರ್ಭದಲ್ಲಿ ಆವಿಜಾತ ಶುವನ್ನು ಪೋಷಿಸುವಳೋ ಹಾಗೆ ಜಾತವೇದನು ಇಂಧನರೂಪದಲ್ಲಿದ್ದು ಜನಗಳು ಪ್ರತಿದಿನವೂ ಆವಾಹಿಸುವ, ತಮ್ಮ ಸರ್ವಚೇತನವನ್ನು ಪಡೆಯುವ ಮತ್ತು ಯಜ್ಞಯಾಗಾದಿಗಳಲ್ಲಿ ಪ್ರತ್ಯಕ್ಷವಾಗುವ ಒಂದು ಶಕ್ತಿಯನ್ನು ಪೋಷಿಸುತ್ತಿದ್ದಾನೆ ಆದೇ ಅಗ್ನಿಯು. ಇದೇ ನೀನು ಹುಡುಕುತ್ತಿರುವ ಅದು,

**ಯತಶ್ಚೋದೇತಿ ಸೂರ್ಯೋ ಅಸ್ತಂ ಯತ್ರ ಚ ಗಚ್ಛತಿ ।**
**ತಂ ದೇವಾಸ್ಸರ್ವೇಽರ್ಪಿತಾಸ್ತದುನಾತ್ಯೇತಿ ಕಶ್ಚನ ॥**
**ಎತದ್ವೈತತ್ ॥೯॥**

ಯಾವ ಮಹಾಮಹಿಮನಿಂದ ಸೂರ್ಯನು ಉದಯಿಸುತ್ತಾನೋ, ಯಾರಲ್ಲಿಗೆ ಅಸ್ತಂಗತನಾಗುತ್ತಾನೋ ಅವನಲ್ಲೇ ದೇವತೆಗಳೆಲ್ಲಾ ಆಶ್ರಯ ವನ್ನು ಪಡೆದಿದ್ದಾರೆ. ಅವನನ್ನು ಮೀರಿದುದು ಯಾವುದೂ ಇಲ್ಲ. ಇದೇ ನೀನು ಹುಡುಕುತ್ತಿರುವ ಅದು.

**ಯದೇವೇಹ ತದಮುತ್ರ ಯದಮುತ್ರ ತದನ್ವಿಹ ।**
**ಮೃತ್ಯೋಃ ಸಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ**
**॥೧೦॥**

ಯಾವುದು ಇಲ್ಲಿರುವುದೋ ಅದೇ ಅಲ್ಲಿರುವುದು. ಯಾವುದು ಅಲ್ಲಿರು ವುದೊ ಅದೇ ಇಲ್ಲಿಯೂ ಇರುವುದು. ಯಾವನು ಇಲ್ಲಿ ಬೇಧವಾಗಿರುವಂತೆ ನೋಡುತ್ತಾನೋ ಅವನು ಮೃತ್ಯುವಿನಿಂದ ಮೃತ್ಯುವಿನೆಡೆಗೆ ತೆರಳುತ್ತಾನೆ.

**ಮನಸೈವೇದಮಾಪ್ತವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಂ ಗಚ್ಛತಿ ಯ ಇಹ ನಾನೇವ ಪಶ್ಯತಿ**
**॥೧೧॥**

ಎಲ್ಲರೂ ಮನಸ್ಸಿನ ಮೂಲಕವೇ ಈ ಪ್ರಪಂಚದಲ್ಲಿರುವ ಯಾವ ವಸ್ತುವಿನಲ್ಲೂ ವ್ಯತ್ಯಾಸವಿಲ್ಲವೆಂಬುದನ್ನು ಅರಿಯುತ್ತಾರೆ. ಯಾವನು ಇಲ್ಲಿ ಭೇದವಾಗಿರುವಂತೆ ನೋಡುತ್ತಾನೋ ಅವನು ಮೃತ್ಯುವಿನಿಂದ ಮೃತ್ಯುವಿಗೆ ಹೋಗುತ್ತಾನೆ,

**ಅಂಗುಷ್ಠಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತಿ ।**
**ಈಶಾನೋ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥**
**ಏತದ್ವೈತತ್ ॥೧೨॥**

ನಮ್ಮ ಹೃದಯಮಧ್ಯದಲ್ಲಿ ಪ್ರತಿಷ್ಠಿತವಾಗಿರುವ ಪರಮಾತ್ಮನು ಒಂದು ಅಂಗುಷ್ಠದ ಪ್ರಮಾಣದಲ್ಲಿರುವನು. ಅವನು ಹಿಂದೆಯೂ ಮತ್ತು ಮುಂದೆಯೂ ಪ್ರಭುವಾದವನು. ಅವನನ್ನು ಕಂಡ ತರುವಾಯ ಅವನು

ಯಾವುದರಿಂದಲೂ ಹಿಂತಿರುಗುವುದಿಲ್ಲ ಮತ್ತು ನಿಂದಿಸುವುದಿಲ್ಲ. "ಇ
ನೀನು ಬಯುಸುವ ಅದು."

**ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾ ಧೂಮಕಃ ।**
**ಈಶಾನೋ ಭೂತಭವ್ಯಸ್ಯ ಸ ಏವಾದ್ಯಸ ಉಶ್ವಃ ॥**
**ಏತದ್ವೈತತ್ ॥೧೩॥ ೧**

ನಮ್ಮ ಒಳಗೆ ಇರುವ ಪುರುಷನು ಒಂದು ಅಂಗುಷ್ಠಕ್ಕಿಂತ ಹೆಚ್ಚು ಗಾತ್ರದಲ್ಲಿಲ್ಲ. ಆದರೂ ಅವನು ಹೊಗೆಯಾಡದೆ ಇರುವ ಪ್ರಜ್ವಲಿಸು ಅಗ್ನಿಯಂತಿದ್ದಾನೆ. ಮಾನವರಿಗೆ ಹಿಂದೂ ಮತ್ತು ಮುಂದೂ ಯಜಮಾ .ನಾಗಿದ್ದಾನೆ. ಅವನು ಇಂದೂ ಇದ್ದಾನೆ. ನಾಳೆಯೂ ಇರುತ್ತಾ "ಇದೇ ನೀನು ಭಾವಿಸುವ ಅದು."

**ಯಥೋದಕಂ ದುರ್ಗೇ ವೃಷ್ಟಂ ಪರ್ವತೇಷು ವಿಧಾವತಿ ।**
**ಏವಂ ಧರ್ಮಾನ್ ಪೃಥಕ್ ಪಶ್ಯಂಸ್ತಾನೇವಾನುವಿಧಾವತಿ ॥೧೪॥**

ಯಾವ ರೀತಿ ಪರ್ವತದ ಶಿಖರದಮೇಲೆ ಸುರಿದ ಮಳೆಯ ನೀರು ತಗ್ಗಾದ ಪ್ರದೇಶಗಳಲ್ಲಿ ಹರಿದುಹೋಗುತ್ತದೆಯೋ ಹಾಗೆ ಯಾರು ಆತ್ಮನಲ್ಲಿ ನಾನಾ ಕಾರ್ಯಕಾರಣಗಳನ್ನು ಕಂಡುಕೊಳ್ಳುತ್ತಾರೋ ಅವರು ನೋಡಿದ ಆ ಮಾರ್ಗದಲ್ಲೇ ಗಮಿಸುತ್ತಾರ.

**ಯಥೋದಕಂ ಶುದ್ಧೇ ಶುದ್ಧಮಾಸಿಕ್ತಂ ತಾದೃಗೇವ ಭವತಿ ।**
**ಏವಂ ಮುನೇರ್ವಿಜಾನತ ಆತ್ಮಾ ಭವತಿ ಗೌತಮ ॥೧೫॥**

ಯಾವ ರೀತಿ ಪರಿಶುದ್ಧ ಜಲದಲ್ಲಿ ಹಾಕಿದ ಪರಿಶುದ್ಧ ಜಲವು ಪರಿಶುದ್ಧವಾಗಿಯೇ ಇರುತ್ತದೋ ಅದೇರೀತಿ ಭಗವಂತನನ್ನು ಅರಿತಿರುವ ಯೋಗಿಗಳ ಆತ್ಮವೂ ಪರಿಶುದ್ಧವಾಗಿರುತ್ತದೆ—ಗೌತಮ ಸಂಜಾತನೇ ಎಂದು ಯಮನು ಹೇಳುತ್ತಾನೆ.

ಅಧ್ಯಾಯ ೨— ವಲ್ಲಿ ೫

**ಪುರಮೇಕಾದಶದ್ವಾರಮಜಸ್ಯಾವಕ್ರಚೇತಸಃ ।**
**ಅನುಷ್ಠಾಯ ನ ಶೋಚತಿ ವಿಮುಕ್ತಶ್ಚ ವಿಮುಚ್ಯತೇ ॥**
**ಏತದ್ವೈ ತತ್ ॥೧॥**

ಜನ್ಮಾದಿ ವಿಕ್ರಿಯಾರಹಿತನೂ, ಋಜುಬುದ್ಧಿಯುಳ್ಳವನೂ ಆದ ಆತ್ಮ ನಿಗೆ ಹನ್ನೊಂದು ದ್ವಾರಗಳುಳ್ಳ ಪುರವುಂಟು. ಇದನ್ನು ತಿಳಿದುಕೊಂಡು ಆತನು ಶೋಕಿಸುವುದಿಲ್ಲ. ಆದರೆ ರಾಗದ್ವೇಷಾದಿಗಳಿಂದ ಮುಕ್ತನಾಗಿ ಪ್ರಕೃತಿಸಂಬಂಧದಿಂದಲೂ ಮುಕ್ತನಾಗುತ್ತಾನೆ. ಇದೇ ನೀನು ಹುಡುಕುತ್ತಿರುವ ಅದು.

**ಹಂಸಶ್ಶುಚಿಷದ್ವಸುರಂತರಿಕ್ಷಸದ್ಧೋತಾ ವೇದಿಷದತಿಥಿ**
**ರ್ದುರೋಣಸತ್ ।**
**ನೃಷದ್ವರಸದೃತಸದ್ವ್ಯೋಮಸದಬ್ಜಾ ಗೋಜಾ**
**ಋತಜಾ ಅದ್ರಿಜಾ ಋತಂ ಬೃಹತ್ ॥೨॥**

ತೇಜಸ್ವಿಯಾದ ಸೂರ್ಯ, ಅಂತರಿಕ್ಷದಲ್ಲಿರುವ ವಾಯುವು, ವೇದಿಕೆಯಲ್ಲಿರುವ ಅಗ್ನಿ ಅಥವಾ ಋತ್ವಿಕ್, ಮನೆಗೆ ಬಂದ ಅತಿಥಿ, ಮನುಷ್ಯನಲ್ಲಿ ಆತ್ಮನಾಗಿರುವವನು, ದೇವತೆಗಳಲ್ಲಿರುವವನು, ಸತ್ಯಲೋಕದಲ್ಲಿರುವವನು, ಪರಮಪದದಲ್ಲಿರುವ ಜೀವಾತ್ಮ, ನೀರಿನಲ್ಲಿಯೂ ಭೂಮಿಯಲ್ಲಿಯೂ ಹುಟ್ಟಿದವುಗಳು, ಕರ್ಮಫಲವಾದ ಸ್ವರ್ಗಾದಿಗಳು, ಪರ್ವತಗಳಿಂದ ಹುಟ್ಟಿದವುಗಳು, ಇವೆಲ್ಲವೂ ಸತ್ಯ ಮತ್ತು ನಿತ್ಯ.

**ಊರ್ಧ್ವಂ ಪ್ರಾಣಮುನ್ನಯತ್ಯಪಾನಂ ಪ್ರತ್ಯಗಸ್ಯತಿ ।**
**ಮಧ್ಯೇ ವಾಮನಮಾಸೀನಂ ವಿಶ್ವೇ ದೇವಾ ಉಪಾಸತೇ ॥೩॥**

ಅವನೇ ಪ್ರಾಣವಾಯುವನ್ನು ಮೇಲ್ಮುಖವಾಗಿಯೂ, ಅಪಾನ ವಾಯುವನ್ನು ಕೆಳಮುಖವಾಗಿಯೂ ಆಡಿಸುವವನು, ವಾಮನನಾದ ಅವನು ಮಧ್ಯಭಾಗದಲ್ಲಿ ಕುಳಿತಿರುತ್ತಾನೆ. ಅವನನ್ನೇ ದೇವತೆಗಳೆಲ್ಲಾ ಪೂಜಿಸುತ್ತಾರೆ.

**ಅಸ್ಯ ವಿಸ್ರಂಸಮಾನಸ್ಯ ಶರೀರಸ್ಥಸ್ಯ ದೇಹಿನಃ ।**
**ದೇಹಾದ್ವಿಮುಚ್ಯಮಾನಸ್ಯ ಕಿಮತ್ರ ಪರಿಶಿಷ್ಯತೇ ॥**
**ಏತದ್ವೈತತ್ ॥೪॥**

ಯಾವಾಗ ಈ ದೇಹದಲ್ಲಿ ಬಂಧಿತವಾಗಿರುವ ಆತ್ಮವು ಬಿಡುಗಡೆ ಹೊಂದಿ ಹೊರಗೆ ಬರುತ್ತದೆಯೋ ಆಗ ಆ ದೇಹದಲ್ಲಿ ಉಳಿದಿರುವುದಾದರೂ ಏನು ? ಇದೇ ನೀನು ಹುಡುಕುತ್ತಿರುವ ಅದು.

**ನ ಪ್ರಾಣೇನ ನಾಪಾನೇನ ಮರ್ತ್ಯೋ ಜೀವತಿ ಕಶ್ಚನ ।**
**ಇತರೇಣ ತು ಜೀವಂತಿ ಯಸ್ಮಿನ್ನೇತಾವುಪಾಶ್ರಿತೌ ॥೫॥**

ಮಾನವರು ಬರೀ ಪ್ರಾಣವಾಯುವಿನಿಂದಾಗಲೀ, ಅಪಾನವಾಯುವಿನಿಂದಾಗಲೀ ಬದುಕಿರಲಾರರು. ಯಾವ ಒಂದರಲ್ಲಿ ಇವೆರಡೂ ಮಿಳಿತವಾಗಿದೆಯೋ ಅದರಿಂದಲೇ ಬದುಕಿರುತ್ತಾರೆ.

**ಹಂತತ ಇದಂ ಪ್ರವಕ್ಷ್ಯಾಮಿ ಗುಹ್ಯಂ ಬ್ರಹ್ಮ ಸನಾತನಂ ।**
**ಯಥಾಚ ಮರಣಂ ಪ್ರಾಪ್ಯ ಆತ್ಮಾ ಭವತಿ ಗೌತಮ ॥೬॥**

ನಿಜವಾಗಿಯೂ ಓ ಗೌತಮನೇ. ಸನಾತನವಾದ ಬ್ರಹ್ಮತತ್ತ್ವವನ್ನೂ ಅದರ ಜೊತೆಯಲ್ಲಿ ಮಾನವನು ಮೃತಪಟ್ಟನಂತರ ಅಲ್ಲಿಯ ಆತ್ಮವು ಏನಾಗುತ್ತದೆಂಬ ವಿಚಾರವನ್ನೂ ನಿನಗೆ ತಿಳಿಯುವಡಿಸುತ್ತೇನೆ.

**ಯೋನಿಮನ್ಯೇ ಪ್ರಪದ್ಯಂತೇ ಶರೀರತ್ವಾಯ ದೇಹಿನಃ ।**
**ಸ್ಥಾಣುಮನ್ಯೇಽನುಸಂಯಂತಿ ಯಥಾ ಕರ್ಮ ಯಥಾ ಶ್ರುತಂ ॥೭॥**

ಅವರವರ ಜೀವಿತಕಾಲದಲ್ಲಿ ಮಾಡಿರುವ ಕರ್ಮಗಳ ಫಲವಾಗಿಯೂ ಮತ್ತು ಉಪಾಸನೆಯ ಫಲವಾಗಿಯೂ ಕೆಲವರು ಶರೀರಧಾರಣಕ್ಕಾಗಿ ಯೋನಿಗಳನ್ನೂ ಕೆಲವರು ಸ್ಥಾವರಭಾವವನ್ನೂ ಪ್ರವೇಶಿಸುತ್ತಾರೆ.

**ಸ ಏಷ ಸುಪ್ತೇಷು ಜಾಗರ್ತಿ ಕಾಮಂಕಾಮಂ ಪುರುಷೋ**
**ನಿರ್ಮಿಮಾಣಃ ।**
**ತದೇವ ಶುಕ್ರಂ ತದ್‍ಬ್ರಹ್ಮ ತದೇವಾಮೃತಮುಚ್ಯತೇ ।**
**ತಸ್ಮಿಂ ಲೋಕಾಶ್ರಿತಾಸ್ಸರ್ವೇ ತದುನಾತ್ಯೇತಿ ಕಶ್ಚನ ॥**
**ಏತದ್ವೈತತ್ ॥೮॥**

ಸುಪ್ತಾವಸ್ಥೆಯಲ್ಲಿರುವ ಆತ್ಮನನ್ನು ಎಬ್ಬಿಸಿ ಕಾಮವು ಅನೇಕವಿಧವಾದ ಆಶೆಗಳನ್ನು ಮುಂದಿಡುತ್ತದೆ. ಇವಕ್ಕೆ ಒಳಪಡದೆ ಎಚ್ಚರದಿಂದಿರುವ ಪುರುಷನೇ ಜ್ಯೋತಿಸ್ವರೂಪನೂ, ಬ್ರಹ್ಮನೂ, ಜರಾಮರಣಗಳಿಲ್ಲದವನೂ ಆಗಿದ್ದಾನೆ. ಅವನಿಗಾಗಿ ಈ ಪ್ರಪಂಚವು ಸೃಷ್ಟಿಸಲ್ಪಟ್ಟಿದೆ. ಅವನಿಗೆ ಮೇಲ್ಪಟ್ಟವರು ಯಾರೂ ಇಲ್ಲ. ಇದೇ ನೀನು ಭಾವಿಸುವ ಅದು.

**ಅಗ್ನಿರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ**
**ರೂಪಂ ಪ್ರತಿರೂಪೋ ಬಭೂವ ।**
**ಏಕಸ್ತಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ**
**ಪ್ರತಿರೂಪೋ ಬಹಿಶ್ಚ ॥೯॥**

ಅಗ್ನಿಯು ಈ ಪ್ರಪಂಚದಲ್ಲಿ ಪ್ರವೇಶಿಸುತ್ತಲೇ ಅನೇಕರೂಪಗಳಿಂದ ಬೆಳಗುತ್ತಾನೆ. ತನ್ನ ರೂಪಗಳಿಗೆ ಪ್ರತಿರೂಪಗಳನ್ನೂ ಪಡೆಯುತ್ತಾನೆ. ಸರ್ವಭೂತಗಳ ಅಂತರಾತ್ಮನು ಒಂದೇ ರೂಪದಿಂದಿದ್ದರೂ ಆಕಾರಗಳು ಬೇರ ಬೇರೆಯಾಗಿಯೇ ಇರುತ್ತವೆ ಮತ್ತು ಹೊರಗೂ ಇರುತ್ತವೆ.

**ವಾಯುರ್ಯಥೈಕೋ ಭುವನಂ ಪ್ರವಿಷ್ಟೋ ರೂಪಂ**
**ರೂಪಂ ಪ್ರತಿರೂಪೋ ಬಭೂವ ।**
**ಏಕಸ ಥಾ ಸರ್ವಭೂತಾಂತರಾತ್ಮಾ ರೂಪಂ ರೂಪಂ**
**ಪ್ರತಿರೂಪೋ ಬಹಿಶ್ಚ ॥೧೦॥**

ಇದೇ ರೀತಿ ವಾಯುವೂ ಕೂಡ ಈ ಪ್ರಪಂಚವನ್ನು ಪ್ರವೇಶಿಸುತ್ತಲೇ ಎಲ್ಲ ರೂಪಗಳಲ್ಲೂ ಪ್ರತಿರೂಪವಾಗಿರುವುದೋ ಹಾಗೆಯೇ ಸರ್ವ ಭೂತಗಳ ಒಬ್ಬನೇ ಆತ್ಮನು ಎಲ್ಲ ರೂಪಗಳಿಗೂ ಪ್ರತಿರೂಪನಾಗಿರುವನು ಮತ್ತು ಹೊರಗೂ ಇರುವನು.

**ಸೂರ್ಯೋ ಯಥಾ ಸರ್ವಲೋಕಸ್ಯ ಚಕ್ಷುಃ ನ ಲಿಪ್ಯತೇ**
**ಚಾಕ್ಷುಷೈರ್ಬಾಹ್ಯದೋಷೈಃ ।**
**ಏಕಸ್ಥಥಾ ಸರ್ವಭೂತಾಂತರಾತ್ಮಾ ನ ಲಿಪ್ಯತೇ**
**ಲೋಕದುಃಖೇನ ಬಾಹ್ಯಂ ॥೧೧॥**

ಹೀಗೆಯೇ ಸೂರ್ಯನೂ ಕೂಡ ಈ ಜಗತ್ತಿಗೆಲ್ಲಾ ಕಣ್ಣಾಗಿದ್ದಾನೆ. ಆದರೂ ಬಾಹ್ಯ ದೋಷ ಮತ್ತು ಲೋಪಗಳಿಂದಾಗಿ ತನ್ನ ತೇಜಸ್ಸನ್ನು ಮಲಿನಗೊಳಿಸಿಕೊಳ್ಳುವುದಿಲ್ಲ. ಹಾಗೆಯೇ ಅದ್ವಿತೀಯನಾದ ಪರಮಾತ್ಮನೂ ಸರ್ವಪ್ರಾಣಿಗಳ ಅಂತರಾತ್ಮನಾಗಿದ್ದರೂ ಲೋಕದ ದುಃಖಗಳಿಂದ ಲಿಪ್ತನಾಗುವುದಿಲ್ಲ. ಏಕೆಂದರೆ ಅವನು ಹೊರಗೆ ಇರುತ್ತಾನೆ.

**ಏಕೋವಶೀ ಸರ್ವಭೂತಾಂತರಾತ್ಮಾ ಏಕಂ ರೂಪಂ**
**ಬೀಜಂ ಬಹುಧಾ ಯಃಕರೋತಿ ।**
**ತಮಾತ್ಮಸ್ಥಂ ಯೇನುಪಶ್ಯಂತಿ ಧೀರಾಃ ತೇಷಾಂ ಸುಖಂ**
**ಶಾಶ್ವತಂ ನೇತರೇಷಾಂ ॥೧೨॥**

ಒಂದು ಶಾಂತವಾದ ಸರ್ವಭೂತಗಳಿಗೂ ಅಧಿಕಾರಿಯಾದ ತಾನು ಸೃಷ್ಟಿಸುವ ಎಲ್ಲಾ ಜೀವಿಗಳಲ್ಲೂ ಒಂದೇ ರೂಪದಿಂದಿದ್ದರೂ ಅವನ್ನು ಬಹು ವಿಧವನ್ನಾಗಿ ಮಾಡುವನೋ ಹಾಗೆ ಬೀಜವೂ ಒಂದೇ ಆದರೂ ನಾನಾರೂಪ

ಗಳನ್ನು ಧರಿಸುತ್ತವೆ. ಯಾರು ಅವನನ್ನು ಆತ್ಮದಲ್ಲಿರುವವನನ್ನಾಗಿ ನೋಡು ವರೋ ಅವರು ಶಾಶ್ವತವಾದ ಸುಖವನ್ನು ಹೊಂದುತ್ತಾರೆ. ಇತರರಲ್ಲ.

**ನಿತ್ಯೋಽನಿತ್ಯಾನಾಂ ಚೇತನಶ್ಚೇತನಾನಾಮೇಕೋ ಬಹೂನಾಂ**
**ಯೋ ವಿದಧಾತಿ ಕಾಮಾನ್ ।**
**ತಮಾತ್ಮಸ್ಥಂ ಯೇಽನುಪಶ್ಯಂತಿ ಧೀರಾಃ ತೇಷಾಂ ಶಾಂತಿಃ**
**ಶಾಶ್ವತೀ ನೇತರೇಷಾಂ ॥೧೩॥**

ನಿತ್ಯನೂ, ಅನಿತ್ಯನೂ, ಚೇತನನೂ, ಅಚೇತನನೂ ಎಲ್ಲವೂ ಒಬ್ಬನೇ ಆದ ಆತ್ಮನು ಸರ್ವವಿಧವಾದ ಕಾಮನೆಗಳನ್ನೂ ಕೊಡುತ್ತಿರುತ್ತಾನೆ. ಅವ ನನ್ನು ಆತ್ಮದಲ್ಲಿರುವವನನ್ನಾಗಿ ಯಾವ ವಿವೇಕಿಗಳು ನೋಡುತ್ತಾರೋ ಅವರಿಗೆ ಶಾಶ್ವತವಾದ ಸುಖವು ಲಭ್ಯವಾಗುತ್ತದೆ. ಇತರರಿಗಲ್ಲ.

**ತದೇತದಿತಿ ಮನ್ಯಂತೇಽನಿರ್ದೇಶ್ಯಂ ಪರಮಂ ಸುಖಂ ।**
**ಕಥಂ ನು ತದ್ವಿಜಾನೀಯಾಂ ಕಿಮುಭಾತಿ ವಿಭಾತಿ ವಾ ॥೧೪॥**

ನಚಿಕೇತನು ಕೇಳುತ್ತಾನೆ. " ನಿರ್ದೇಶಿಸಲು ಅರ್ಹವಾದ ಆ ಪರಮ ಸುಖವನ್ನು ಇಂತಹುದೇ ಎಂದು ಯೋಗಿಗಳು ತಿಳಿಯುತ್ತಾರೆ. ನಾನು ಅದನ್ನು ಹೇಗೆ ತಿಳಿದುಕೊಳ್ಳಲಿ? ಅದರಲ್ಲೂ ಅದು ಪ್ರಕಾಶಿಸುವುದೋ ಅಥವಾ ಪ್ರಕಾಶಿಸುವುದಿಲ್ಲವೋ ಒಂದೂ ತಿಳಿಯದಾಗಿದೆ. "

**ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಂ**
**ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
**ತಮೇವ ಭಾಂತಮನುಭಾತಿ ಸರ್ವಂ ತಸ್ಯಭಾಸಾ**
**ಸರ್ವಮಿದಂ ವಿಭಾತಿ ॥೧೫॥**

ಯಮನು ಹೇಳುತ್ತಾನೆ—" ಅಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ. ಚಂದ್ರನೂ, ನಕ್ಷತ್ರಗಳೂ ಹೊಳೆಯುವುದಿಲ್ಲ. ಅಲ್ಲಿ ಮಿಂಚೂ ಬೆಳಗಲಾ

ರದು. ಈ ಅಗ್ನಿಯು ಪ್ರಕಾಶಿಸುವುದೆಲ್ಲಿ? ಪ್ರಕಾಶಿಸುತ್ತಿರುವ ಅವನೊಬ್ಬನನ್ನೇ ಅನುಕರಿಸಿ ಎಲ್ಲವೂ ಪ್ರಕಾಶಿಸುತ್ತಿರುವುದು. ಅವನ ಪ್ರಕಾಶದಿಂದಲೇ ಇದೆಲ್ಲವೂ ಪ್ರಕಾಶಿಸುತ್ತಿರುವುದು.

ಅಧ್ಯಾಯ ೨—ವಲ್ಲಿ ೬

**ಊರ್ಧ್ವಮೂಲೋಽವಾಕ್ ಶಾಖಾ ಏಷೋಽಶ್ವತ್ಥಃ ಸನಾತನಃ ।**
**ತದೇವ ಶುಕ್ರಂ ತದ್ಬ್ರಹ್ಮ ತದೇವಾಮೃತ ಮುಚ್ಯತೇ ।**
**ತಸ್ಮಿಂಲ್ಲೋಕಾಃ ಶ್ರಿತಾಃ ಸರ್ವೇ ತದುನಾತ್ಯೇತಿ ಕಶ್ಚನ ॥**
**ಏತದ್ವೈತತ್ ॥೧॥**

ಈ ಲೋಕವು ಒಂದು ದೊಡ್ಡ ಅಶ್ವತ್ಥವೃಕ್ಷದಂತಿದ್ದು ಅದರ ಬೇರುಗಳು ಆಕಾಶದಕಡೆಗೂ ಕೊಂಬೆಗಳು ಭೂಮಿಯಕಡೆಗೂ ಪ್ರಸರಿಸಿವೆ. ಇದನ್ನು ಪೋಷಿಸುವವನು ತೇಜಸ್ವಿಯಾದ ಪರಬ್ರಹ್ಮನು. ಅದೇ ಅಮೃತ ಎಂದು ಹೇಳಲ್ಪಟ್ಟಿದೆ. ಎಲ್ಲ ಲೋಕಗಳೂ ಅದರಲ್ಲಿ ಆಶ್ರಯ ಹೊಂದಿವೆ. ಅವನಿಗೆ ಮೀರಿದುದು ಯಾವುದೂ ಇಲ್ಲ. ಇದೇ ನೀನು ಹುಡುಕುತ್ತಿರುವುದು.

**ಯದಿದಂ ಕಿಂಚ ಜಗತ್ಸರ್ವಂ ಪ್ರಾಣ ಏಜತಿ ನಿಃಸೃತಂ ।**
**ಮಹದ್ಭಯಂ ವಜ್ರಮುದ್ಯತಂ ಯ ಏತದ್ವಿದುರಮೃತಾಸ್ತೇ**
**ಭವಂತಿ ॥೨॥**

ಈ ಲೋಕದ ಚರಾಚರಗಳೆಲ್ಲಾ ಪ್ರಾಣವನ್ನು ಸೇರಿ ಮುಂದುವರೆಯುತ್ತವೆ. ಇವೆಲ್ಲಕ್ಕೂ ಮಹಾ ಭಯಂಕರಕಾದವನು ಆ ಪರಮಾತ್ಮನೊಬ್ಬನೇ. ಅವನು ಮಿಂಚಿನ ತೀಕ್ಷ್ಣತೆಗಿಂತ ತೇಜಸ್ವಿಯಾಗಿದ್ದಾನೆ. ಅವನನ್ನು ಬಲ್ಲವರೇ ಅಮರರು.

**ಭಯಾದಸ್ಯಾಗ್ನಿಸ್ತಪತಿ ಭಯಾತ್ತಪತಿ ಸೂರ್ಯಃ ।**
**ಭಯಾದಿಂದ್ರಶ್ಚ ವಾಯುಶ್ಚ ಮೃತ್ಯುರ್ಧಾವತಿ ಪಂಚಮಃ ॥೩॥**

ಅವನ ಹೆದರಿಕೆಯಿಂದಲೇ ಅಗ್ನಿಯು ದಹಿಸುತ್ತದೆ. ಅವನ ಹೆದರಿಕೆಯಿಂದ ಸೂರ್ಯನೂ ಶಾಖೋತ್ಪನ್ನನಾಗಿದ್ದಾನೆ. ಅವನ ಹೆದರಿಕೆಯಿಂದಲೇ ಇಂದ್ರ, ವಾಯು ಮತ್ತು ಯಮ ಇವರು ತಮ್ಮ ತಮ್ಮ ಕರ್ತವ್ಯಗಳನ್ನು ಮಾಡುತ್ತಿದ್ದಾರೆ.

**ಇಹಚೇದಶಕದ್ಬೋದ್ಧುಂ ಪ್ರಾಕ್‌ಶರೀರಸ್ಯ ವಿಸ್ರಸಃ ।**
**ತತಸ್ಸರ್ಗೇಷು ಲೋಕೇಷು ಶರೀರತ್ವಾಯ ಕಲ್ಪತೇ ॥೪॥**

ಈ ಮಾನವ ಲೋಕದಲ್ಲಿ ನಿನ್ನಿಂದ ದೇಹವು ಕಳಚಿಬೀಳುವ ಮುನ್ನ ಬ್ರಹ್ಮನನ್ನು ತಿಳಿದುಕೊಳ್ಳಲು ಶಕ್ತನಾಗಿದ್ದರೆ ಮುಂದೆ ಆ ಪರಮಾತ್ಮನ ಸೃಷ್ಟಿಯಲ್ಲಿರುವ ದೇವಲೋಕವನ್ನು ಸೇರಿ ಶರೀರವನ್ನು ಹೊಂದಲು ಸಮರ್ಥನಾಗುತ್ತೀ.

**ಯಥಾऽऽದರ್ಶೇ ತಥಾತ್ಮನಿ ಯಥಾ ಸ್ವಪ್ನೇ**
**ತಥಾ ಪಿತೃಲೋಕೇ ।**
**ಯಥಾಪ್ಸು ಪರೀವ ದದೃಶೇ ತಥಾ ಗಂಧರ್ವ ಲೋಕೇ**
**ಛಾಯಾತಪಯೋರಿವ ಬ್ರಹ್ಮಲೋಕೇ ॥೫॥**

ಅಮಾವಾಸ್ಯೆಯಲ್ಲಿ ಹೇಗೆ ವಸ್ತುಗಳು ಸ್ಪಷ್ಟವಾಗಿ ಕಾಣುವುದಿಲ್ಲವೋ ಹಾಗೆ ಪಿತೃಲೋಕಗಳಲ್ಲೂ, ಸ್ವಪ್ನಲೋಕಗಳಲ್ಲೂ ಯಾವುವೂ ಸ್ಪಷ್ಟವಾಗಿ ಕಾಣಲಾರದು. ಹಾಗೆಯೇ ನೀರಿನಲ್ಲೂ ಗಂಧರ್ವಲೋಕದಲ್ಲೂ ನೆರಳು ಬಿಸಿಲುಗಳಲ್ಲೂ ಅಷ್ಟೇಕೆ ಬ್ರಹ್ಮಲೋಕದಲ್ಲೂ ಕೂಡ ಆ ಪರಮಾತ್ಮನನ್ನು ಕಾಣಲು ಸಾಧ್ಯವಾಗಲಾರದು.

**ಇಂದ್ರಿಯಾಣಾಂ ಪೃಥಗ್ಭಾವಮುದಯಾಸ್ತಮಯೌ ಚ ಯತ್ ।**
**ಪೃಥಗುತ್ಪದ್ಯಮಾನಾನಾಂ ಮತ್ವಾಧೀರೋ ನಶೋಚತಿ ॥೬॥**

ಪ್ರಶಾಂತನಾದ ಆತ್ಮನು ಇಂದ್ರಿಯಗಳ ಭಿನ್ನತೆಯನ್ನರಿತು ಅವುಗಳನ್ನು ಗೆದ್ದು ಅವುಗಳನ್ನು ಅದರ ಅವಶ್ಯಕತೆಗೆ ತಕ್ಕಂತೆ ಬೇರೆ ಬೇರೆಯಾಗಿ

ವಿಂಗಡಿಸಿ ತನ್ನ ಅಧೀನದಲ್ಲಿ ಆವುಗಳನ್ನು ಇಟ್ಟುಕೊಳ್ಳುತ್ತಾನೆ. ಇಂತಹವನ್ನಿ ಯಾವ ಶೋಕವೂ ಉಂಟಾಗಲಾರದು.

**ಇಂದ್ರಿಯೇಭ್ಯಃ ಪರಂ ಮನೋ ಮನಸಸ್ಸತ್ವಮುತ್ತಮಂ ।**
**ಸತ್ವಾದಧಿ ಮಹಾನಾತ್ಮಾ ಮಹತೋಽವ್ಯಕ್ತಮುತ್ತಮಂ ॥೭॥**

ಮನಸ್ಸು ಇಂದ್ರಿಯಗಳಿಗಿಂತ ಹೆಚ್ಚಾದದ್ದು ಮನಸ್ಸಿಗಿಂತ ಹೆಚ್ಚಾ ದುದು ಸತ್ವ, ಸತ್ವದ ಮೇಲೆ ಹೆಚ್ಚು ಪ್ರಭಾವವುಳ್ಳದ್ದು ಮಹತ್ತು, ಮಹ ತ್ತಿಗೂ ಮಿಕ್ಕಿದ್ದು ಅವ್ಯಕ್ತ.

**ಅವ್ಯಕ್ತಾತ್ತು ಪರಃ ಪುರುಷೋ ವ್ಯಾಪಕೋಽಲಿಂಗಏವಚ ।**
**ಯದ್ ಜ್ಞಾತ್ವಾ ಮುಚ್ಯತೇ ಜಂತುರಮೃತತ್ವಂ ಚ ಗಚ್ಛತಿ ॥೮॥**

ಅವ್ಯಕ್ತನ ಮೇಲೆ ಆಧಿಕಾರವುಳ್ಳವನು ಪರಮಪುರುಷ ಈತನು ಎಲ್ಲವನ್ನೂ ಆಕ್ರಮಿಸಿಕೊಂಡಿರುತ್ತಾನೆ. ಅವನಿಗೆ ಯಾವ ಗುರ್ತೂ ಇರು ವುದಿಲ್ಲ, ಆಕಾರವೂ ಇಲ್ಲ. ಯಾರು ಅವನನ್ನು ತಿಳಿದುಕೊಳ್ಳುವರೋ ಅವರು ಅಮೃತತ್ವವನ್ನು ಹೊಂದುತ್ತಾರೆ.

**ನ ಸಂದೃಶೇ ತಿಷ್ಠತಿ ರೂಪಮಸ್ಯ ನ ಚಕ್ಷುಷಾ**
**ಪಶ್ಯತಿ ಕಶ್ಚನೈನಂ ।**
**ಹೃದಾಮನೀಷಾ ಮನಸಾಭಿ ಕ್ಲೃಪ್ತೋ ಯಏತದ್ವಿದು**
**ರಮೃತಾಸ್ತೇ ಭವಂತಿ ॥೯॥**

ಆ ಪರಮಾತ್ಮನು ತನ್ನ ರೂಪವನ್ನು ನೋಟಕ್ಕೆ ಸಿಕ್ಕುವಂತೆ ಮಾಡಿ ಕೊಂಡಿಲ್ಲ. ಯಾರೂ ಅವನನ್ನು ಕಣ್ಣಿನಿಂದ ನೋಡಿ ಗುರ್ತಿಸಲಾರರು. ಆದರೆ ಅವನು ಹೃದಯ ಮನಸ್ಸು ಮತ್ತು ದಿವ್ಯಜ್ಞಾನಕ್ಕೆ ಮಾತ್ರ ಗೋಚರ ನಾಗಿರುತ್ತಾನೆ. ಅವನನ್ನು ಅರಿತವರೇ ಅಮರರು.

**ಯದಾಪಂಚಾವತಿಷ್ಠಂತೇ ಜ್ಞಾನಾನಿ ಮನಸಾ ಸಹ ।**
**ಬುದ್ಧಿಶ್ಚ ನವಿಚೇಷ್ಟೇತ ತಾಮಾಹುಃ ಪರಮಾಂ ಗತಿಂ ॥೧೦॥**

ಯಾವಾಗ ಪಂಚೇಂದ್ರಿಯಗಳು ತಮ್ಮ ಕಾರ್ಯಗಳನ್ನು ನಿಲ್ಲಿಸುತ್ತವೆಯೋ, ಮತ್ತು ಮನಸ್ಸು ಇವುಗಳ ಜೊತೆಗೆ ಸೇರುತ್ತದೆಯೋ, ಬುದ್ಧಿಯೂ ತನ್ನ ಕೆಲಸವನ್ನು ಮಾಡುವುದಿಲ್ಲವೋ, ಅದೇ ಅಂತ್ಯರೂಪವಾದ ಪರಮ ಗತಿ ಎಂದು ತಿಳಿ.

**ತಾಂ ಯೋಗಮಿತಿ ಮನ್ಯಂತೇ ಸ್ಥಿರಾಮಿಂದ್ರಿಯಧಾರಣಾಂ ।**
**ಅಪ್ರಮತ್ತಸ್ತದಾ ಭವತಿ ಯೋಗೋಹಿ ಪ್ರಭವಾಪ್ಯಯೌ ॥೧೧॥**

ಯಾವ ಸ್ಥಿತಿಯು ಇಂದ್ರಿಯಗಳು ಮನಸ್ಸಿನಿಂದ ಬಂಧಿಸಲ್ಪಟ್ಟಾಗ್ಯೂ ಚಲಿಸದೆ ದೃಢವಾಗಿರುತ್ತದೆಯೋ ಆ ಸ್ಥಿತಿಯನ್ನು ಯೋಗವೆಂದು ಕರೆಯುತ್ತಾರೆ, ಆಗ ಮನುಷ್ಯನು ಎಚ್ಚರಿಕೆಯಿಂದ ಇರುತ್ತಾನೆ. ಯೋಗವೇ ಜೀವಿಗಳ ಆದಿಯೂ ಅಂತ್ಯವೂ ಎಂದು ಹೇಳಬಹುದು.

**ನೈವ ವಾಚಾ ನ ಮನಸಾ ಪ್ರಾಪ್ತುಂ ಶಕ್ಯೋ ನ ಚಕ್ಷುಷಾ ।**
**ಅಸ್ತೀತಿ ಬ್ರುವತೋಽನ್ಯತ್ರ ಕಥಂ ತದುಪಲಭ್ಯತೇ ॥೧೨॥**

ಮಾನವರು ತಮ್ಮ ಮನೋಬಲದಿಂದಾಗಲೀ, ವಾಚಾಳತ್ವದಿಂದಾಗಲೀ, ಕಣ್ಣಿನ ನೋಟದಿಂದಾಗಲೀ ಭಗವಂತನನ್ನು ಪಡೆಯಲು ಸಾಧ್ಯವಿಲ್ಲ, ಬಲ್ಲವರು ಯಾರಾದರೂ ಅವನಿದ್ದಾನೆಂದು ಹೇಳುವವರಿಗೆ ಅವನ ವಿಚಾರ ತಿಳಿಯಬರುವುದು ಹೇಗೆ ?

**ಅಸ್ತೀತ್ಯೇವೋಪಲಬ್ಧವ್ಯಸ್ತತ್ತ್ವಭಾವೇನ ಚೋಭಯೋಃ ।**
**ಅಸ್ತೀತ್ಯೇವೋಪಲಬ್ಧಸ್ಯ ತತ್ತ್ವಭಾವಃ ಪ್ರಸೀದತಿ ॥೧೩॥**

ಯಾರಾದರೂ ಪರಮಾತ್ಮನಿದ್ದಾನೆ ಎಂಬ ದೃಢವಾದ ಭಾವನೆಯನ್ನು ಹೊಂದಿ ಅವನನ್ನು ತಿಳಿದುಕೊಳ್ಳಬಹುದು. ಹಾಗೆ ಅವನನ್ನು ತಿಳಿದುಕೊಂಡ ತರುವಾಯ ಮನಸ್ಸು ಪ್ರಸನ್ನವಾಗುತ್ತದೆ,

**ಯದಾ ಸರ್ವೇ ಪ್ರಮುಚ್ಯಂತೇ ಕಾಮಾಯೇಽಸ್ಯ ಹೃದಿಶ್ರಿತಾಃ |**
**ಅಥ ಮರ್ತ್ಯೋಽಮೃತೋ ಭವತ್ಯತ್ರ ಬ್ರಹ್ಮ ಸಮಶ್ನುತೇ ||೧೪||**

ಯಾವಾಗ ಇಹಪ್ರಪಂಚದಲ್ಲೇ ಮಾನವ ಕಾಮನೆಗಳು ಹೃದಯದಿಂದ ತುಂಡು ತುಂಡಾಗಿ ಬೀಳುವುವೋ ಆಗ ಮನುಷ್ಯನು ಅಮರತ್ವವನ್ನು ಹೊಂದುತ್ತಾನೆ. ಮತ್ತು ಇಲ್ಲಿಯೇ ಬ್ರಹ್ಮಾನುಭವವನ್ನು ಹೊಂದುತ್ತಾನೆ.

**ಯದಾ ಸರ್ವೇ ಪ್ರಭಿದ್ಯಂತೇ ಹೃದಯಸ್ಯೇಹ ಗ್ರಂಥಯಃ |**
**ಅಥ ಮರ್ತ್ಯೋಽಮೃತೋ ಭವತ್ಯೇತಾವದನುಶಾಸನಂ ||೧೫||**

ಯಾವಾಗ ಮಾನವನ ಹೃದಯದಲ್ಲಿರುವ ರಾಗದ್ವೇಷಾದಿಗಳೆಂಬ ಗ್ರಂಥಿಗಳು ಇಲ್ಲಿಯೇ ನಾಶವಾಗುವವೋ ಆಗ ಮಾನವನು ಅಮೃತನಾಗುವನೇ. ಇಷ್ಟೇ ಉಪದೇಶವು.

**ಶತಂ ಚೈಕಾಂಚ ಹೃದಯಸ್ಯ ನಾಡ್ಯಸ್ತಾಸಾಂ**
**ಮೂರ್ಧಾನಮಭಿನಿಸ್ಸೃತೈಕಾ |**
**ತಯೋರ್ಧ್ವಮಾಯನ್ನಮೃತತ್ವಮೇತಿ ವಿಷ್ವಙ್ಙನ್ಯಾ**
**ಉತ್ಕ್ರಮಣೇ ಭವಂತಿ ||೧೬||**

ಹೃದಯದಲ್ಲಿ ಒಂದು ನೂರಾ ಒಂದು ನಾಡಿಗಳಿರುತ್ತವೆ. ಅವುಗಳ ಪೈಕಿ ಒಂದು ಮಾತ್ರ ಮಾನವನ ನೆತ್ತಿಯವರೆಗೆ ಬಂದಿರುತ್ತದೆ. ಇದರ ಮೂಲಕ ಆತ್ಮನು ಬ್ರಹ್ಮಲೋಕಕ್ಕೆ ಹೋಗಲು ಸಾಧ್ಯವಾಗುತ್ತದೆ. ಆದರೆ ಉಳಿದವುಗಳು ಇಹಜನ್ಮಕ್ಕೆ ಸಂಬಂಧಿಸಿದ ಅವಸ್ಥೆಗಳಿಗೆ ಉಪಯೋಗವಾಗುತ್ತವೆ.

**ಅಂಗುಷ್ಠಮಾತ್ರ ಪುರುಷೋನ್ತರಾತ್ಮಾ ಸದಾ ಜನಾನಾಂ**
**ಹೃದಯೇ ಸನ್ನಿವಿಷ್ಟಃ ।**
**ತಂ ಸ್ವಾಚ್ಛರೀರಾತ್ ಪ್ರವೃಹೇನ್ಮುಂಜಾದಿ**
**ವೇಷೀಕಾಂ ಧೈರ್ಯೇಣ ।**
**ತಂ ವಿದ್ಯಾಚ್ಛುಕ್ರಮಮೃತಂ ತಂ ವಿದ್ಯಾಚ್ಛುಕ್ರ**
**ಮಮೃತಮಿತಿ ॥೧೭॥**

ಅಂಗುಷ್ಠಪರಿಮಾಣವುಳ್ಳವನೂ, ಅಂತರಾತ್ಮನೂ ಆದ ಪುರುಷನು ಜನರ ಹೃದಯದಲ್ಲಿ ಯಾವಾಗಲೂ ಇರುವನು, ಮುಂಜವೆಂಬ ಹುಲ್ಲಿನಿಂದ ದಂಟನ್ನು ತೆಗೆಯುವಂತೆ ಅವನನ್ನು ಅವನ ಶರೀರದಿಂದ ಧೈರ್ಯವಾಗಿ ಬೇರ್ಪಡಿಸಬೇಕು. ಅವನನ್ನು ಶುಕ್ರನಾದ ಅಮೃತನೆಂದು ತಿಳಿದುಕೊಳ್ಳಬೇಕು. ಆವನನ್ನು ಶುಕ್ರನಾದ ಅಮೃತನೆಂದು ತಿಳಿದುಕೊಳ್ಳಬೇಕು.

**ಮೃತ್ಯುಪ್ರೋಕ್ತಾಂ ನಚಿಕೇತೋಽಥಲಬ್ಧ್ವಾ**
**ವಿದ್ಯಾಮೇತಾಂ ಯೋಗವಿಧಿಂ ಚ ಕೃತ್ಸ್ನಂ ।**
**ಬ್ರಹ್ಮಪ್ರಾಪ್ತೋ ವಿರಜೋಽಭೂದ್ವಿಮೃತ್ಯುಃ**
**ಅನ್ಯೋಽಪ್ಯೇವಂ ಯೋ ವಿದಧ್ಯಾತ್ಮಮೇವ ॥೧೮॥**

ಅನಂತರ ನಚಿಕೇತನು ಮೃತ್ಯುವಿನಿಂದ ಹೇಳಲ್ಪಟ್ಟ ಬ್ರಹ್ಮವಿದ್ಯೆಯನ್ನೂ ಮತ್ತು ಸಂಪೂರ್ಣವಾದ ಯೋಗವಿಧಿಯನ್ನೂ ಹೊಂದಿ ರಜಸ್ಸಿಲ್ಲದವನಾಗಿ ಮೃತ್ಯುವಿಲ್ಲದವನಾಗಿ ಬ್ರಹ್ಮವನ್ನು ಪಡೆದುಕೊಂಡನು. ಯಾರು ಈ ಅಧ್ಯಾತ್ಮವನ್ನು ಹೀಗೆಯೇ ತಿಳಿದುಕೊಳ್ಳುತ್ತಾರೋ ಅವರೂ ಸಹ ಮುಕ್ತರಾಗುವರು.

ಕಠೋಪನಿಷತ್ ಸಮಾಪ್ತಃ.

# ಮುಂಡಕೋಪನಿಷತ್

## ಪ್ರಥಮ ಮುಂಡಕ

### ಪ್ರಥಮಃಖಂಡಃ

**ಓಂ ಬ್ರಹ್ಮಾದೇವಾಂ ಪ್ರಥಮಸ್ಸಂಬಭೂವ ।**
**ವಿಶ್ವಸ್ಯಕರ್ತಾ ಭುವನಸ್ಯ ಗೋಪ್ತಾ ।**
**ಸ ಬ್ರಹ್ಮ ವಿದ್ಯಾಂ ಸರ್ವವಿದ್ಯಾ ಪ್ರತಿಷ್ಠಾಮಥರ್ವಾಯ**
**ಜ್ಯೇಷ್ಠಪುತ್ರಾಯ ಪ್ರಾಹ ॥೧॥**

ದೇವತೆಗಳೆಲ್ಲೆಲ್ಲಾ ಮೊದಲು ಜನಿಸಿದವನು ಪರಬ್ರಹ್ಮ. ಈತನು ಜಗತ್ತನ್ನು ಸೃಷ್ಟಿಸಿದನು ಮತ್ತು ಅದನ್ನು ಕಾಪಾಡುವವನಾದನು. ಬ್ರಹ್ಮನ ಹಿರಿಯ ಮಗನಾಗಿ ಅಥರ್ವನು ಜನಿಸಿದನು, ಸರ್ವ ವಿದ್ಯೆಗಳಿಗೂ ತಳಹದಿಯಾದ ಬ್ರಹ್ಮವಿದ್ಯೆಯನ್ನು ಅಥರ್ವನಿಗೆ ಬ್ರಹ್ಮನು ಉಪದೇಶಿಸಿದನು.

**ಅಥರ್ವಣೇಯಾಂ ಪ್ರವದೇತ ಬ್ರಹ್ಮಾಽಥರ್ವಾತಾಂ**
**ಪುರೋವಾಚಾಂಗಿರೇ ಬ್ರಹ್ಮವಿದ್ಯಾಂ ।**
**ಸ ಭಾರದ್ವಾಜಾಯ ಸತ್ಯವಾಹಾಯ ಪ್ರಾಹ ।**
**ಭಾರದ್ವಾಜೋಽಂಗಿರಸೇ ಪರಾವರಂ ॥೨॥**

ಈ ಬ್ರಹ್ಮವಿದ್ಯೆಯು ಮೊದಲು ಬ್ರಹ್ಮನಿಂದ ಅಥರ್ವನಿಗೆ ಹೇಳಲ್ಪಟ್ಟಿತು. ಪುರಾತನನಾದ ಅಥರ್ವನು ಅಂಗಿರಸನಿಗೆ ಬೋಧಿಸಿದನು. ಅವನು ಅದನ್ನು ಸತ್ಯವಾಹನಾದ ಭಾರದ್ವಾಜನಿಗೆ ಹೇಳಿದನು. ಭಾರದ್ವಾಜನು ವೇದದ ಪರಾಪರಭಾಗಗಳನ್ನು ಅಂಗಿರಸ್ಸಿಗೆ ಹೇಳಿದನು.

**ಶೌನಕೋಹವೈ ಮಹಾಶಾಲೋಽಂಗಿರಸಂ**
**ವಿಧಿವದುಪಸನ್ನಃ ಪಪ್ರಚ್ಛ ।**
**ಕಸ್ಮಿನ್ನು ಭಗವೋ ವಿಜ್ಞಾತೇ ಸರ್ವಮಿದಂ ವಿಜ್ಞಾತಂ**
**ಭವತೀತಿ ॥೩॥**

ಮಹಾಗೃಹಸ್ಥನಾದ ಶೌನಕನು ಆಂಗಿರಸ್ಸಿನ ಬಳಿಗೆ ಶಿಷ್ಯನಾಗಿ ಬಂದು ಅವನನ್ನು ಕೇಳುತ್ತಾನೆ "ಭಗವನ್ ಯಾವುದನ್ನು ತಿಳಿದುಕೊಂಡರೆ ಇದೆಲ್ಲ ವನ್ನೂ ತಿಳಿದುಕೊಂಡಂತಾಗುತ್ತದೆ?" ಎಂದು ಪ್ರಶ್ನಿಸಿದನು.

**ತಸ್ಮೈ ಸ ಹೋವಾಚ—ದ್ವೇ ವಿದ್ಯೇ ವೇದಿತವ್ಯೇ ಇತಿ ಹಸ್ಮ |**
**ಯದ್ಬ್ರಹ್ಮವಿದೋ ವದಂತಿ ಪರಾಚೈವಾಪರಾ ಚ ||೪||**

ಆಂಗಿರಸರು ಶೌನಕರಿಗೆ ಹೇಳಿದರು "ಬ್ರಹ್ಮನನ್ನು ನೋಡಿದವರು ಹೇಳುವಂತೆ ಬ್ರಹ್ಮತತ್ವವನ್ನು ಎರಡು ರೂಪಗಳಲ್ಲಿ ಅರಿಯಬೇಕು ಅವು ಯಾವುವೆಂದರೆ ಪರಾ ಮತ್ತು ಅಪರಾ ಎಂಬ ಎರಡು ವಿದ್ಯೆಗಳು.

**ತತ್ರಾಪರಾ ಋಗ್ವೇದೋ ಯಜುರ್ವೇದಸ್ಸಾಮವೇದೋಽ**
**ಥರ್ವವೇದಃ ಶಿಕ್ಷಾಕಲ್ಪೋ ವ್ಯಾಕರಣಂ ನಿರುಕ್ತಂ ಛಂದೋ**
**ಜ್ಯೋತಿಷಮಿತಿ | ಅಥ ಪರಾ ಯಯಾ ತದಕ್ಷರ ಮಧಿಗಮ್ಯತೇ**
**||೫||**

ಅವುಗಳಲ್ಲಿ ಅಪರಾವಿದ್ಯೆ ಯಾವುದೆಂದರೆ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವವೇದ, ಶಿಕ್ಷಾಕಲ್ಪ, ವ್ಯಾಕರಣ, ನಿರುಕ್ತ, ಛಂದಸ್ಸು, ಜ್ಯೋತಿಷ, ಇತಿಹಾಸ ಪುರಾಣಗಳು, ನ್ಯಾಯ ಮೀಮಾಂಸಾ ಮತ್ತು ಧರ್ಮ ಶಾಸ್ತ್ರಗಳು. ಆ ಎಂಬ ಅಕ್ಷರವು ಯಾವ ವಿದ್ಯೆಯಿಂದ ಸಾಕ್ಷಾತ್ಕೃತವಾ ಗುವುದೋ ಅದು ಪರಾವಿದ್ಯೆ.

**ಯತ್ತದದ್ರೇಶ್ಯಮಗ್ರಾಹ್ಯಮಗೋತ್ರಮವರ್ಣ**
**ಮಚಕ್ಷುಶ್ಶ್ರೋತ್ರಂ ತದಪಾಣಿಪಾದಂ |**
**ನಿತ್ಯಂ ವಿಭುಂ ಸರ್ವಗತಂ ಸುಸೂಕ್ಷ್ಮಂ ತದವ್ಯಯಂ**
**ಯದ್ಭೂತ ಯೋನಿಂ ಪರಿಪಶ್ಯಂತಿ ಧೀರಾಃ ||೬||**

ಆ ಬೀಜಾಕ್ಷರವು ಅಗೋಚರವಾದುದು, ಹಿಡಿದುಕೊಳ್ಳಲಾಗದು ಗೋತ್ರಾದಿ ಸಂಬಂಧಗಳಿಲ್ಲದುದು, ವರ್ಣನಾತೀತವಾದುದು, ಕಣ್ಣು ಮತ್ತು ಕಿವಿಗಳಿಲ್ಲದುದು, ಕೈಕಾಲುಗಳನ್ನು ಹೊಂದಿಲ್ಲದುದು. ನಿತ್ಯವಾದುದು,

ಎಲ್ಲೆಡೆಗಳಲ್ಲೂ ವ್ಯಾಪಿಸಿಕೊಳ್ಳತಕ್ಕದ್ದು, ಎಲ್ಲವುಗಳಲ್ಲೂ ಸೂಕ್ಷ್ಮರೂಪದಲ್ಲಿ ರುವುದು, ಶಾಶ್ವತವಾದುದು ಮತ್ತು ಋಷಿ, ಮುನಿಗಳು ಹೇಳುವಂತೆ ಸರ್ವ ಜೀವಿಗಳ ಜನ್ಮಸ್ಥಾನ.

**ಯಥೋರ್ಣನಾಭಿಃ ಸೃಜತೇ ಗೃಹ್ಣತೇ ಚ**
**ಯಥಾಪೃಥಿವ್ಯಾಮೋಷಧಯಃ ಸಂಭವಂತಿ ।**
**ಯಥಾ ಸತಃ ಪುರುಷಾತ್ಕೇಶಲೋಮಾನಿ**
**ತಥಾಕ್ಷರಾತ್ಸಂಬಭೂವತೀಹ ವಿಶ್ವಂ ॥೭॥**

ಯಾವ ರೀತಿ ಜೇಡನು ತನ್ನ ಸುತ್ತಲೂ ಬಲೆಯನ್ನು ಹೆಣೆದು ಅದ ರಲ್ಲೇ ಜೀವಿಸುವುದೋ ; ಅನೇಕ ಗಿಡಮೂಲಿಕೆಗಳು ಭೂಮಿಯಮೇಲೆ ಹೇಗೆ ಹರಡಿಕೊಳ್ಳುವವೋ ; ಬದುಕಿರುವ ಜೀವರಾಶಿಗಳ ತಲೆ ಮತ್ತು ದೇಹದಲ್ಲಿ ಹೇಗೆ ಕೂದಲು ಬೆಳೆಯುವುದೋ ಹಾಗೆ ಈ ವಿಶ್ವವು ಆ ಬೀಜಾಕ್ಷರದಿಂದ ಸಂಭವಿಸುವುದು.

**ತಪಸಾಚೀಯತೇ ಬ್ರಹ್ಮ ತತೋಽನ್ನಮಭಿಜಾಯತೇ ।**
**ಅನ್ನಾತ್ ಪ್ರಾಣೋ ಮನಃ ಸತ್ಯಂ ಲೋಕಾಃ ಕರ್ಮಸುಚಾಮೃತಂ ॥೮॥**

ನಿರಂತರವಾದ ತಪಸ್ಸಿನಿಂದ ಬ್ರಹ್ಮನು ಬೆಳೆಯುತ್ತಾನೆ. ತರುವಾಯ ಅವನಿಂದ ಅನ್ನವು ಸೃಷ್ಟಿಯಾಗುತ್ತದೆ. ಅನ್ನದಿಂದ ಮನಸ್ಸು ಪ್ರಾಣಗಳು ಅಭಿವೃದ್ಧಿಗೊಳ್ಳುತ್ತವೆ. ಕರ್ಮನಿರತನಾಗುವುದರಿಂದ ಅಮೃತತ್ವ ಉಂಟಾ ಗುತ್ತದೆ.

**ಯಃ ಸರ್ವಜ್ಞಃ ಸರ್ವವಿದ್ಯಸ್ಯ ಜ್ಞಾನಮಯಂ ತಪಃ ।**
**ತಸ್ಮಾದೇತದ್ ಬ್ರಹ್ಮ ನಾಮರೂಪಮನ್ನಂಚ ಜಾಯತೇ ॥೯॥**

ಯಾರು ಸರ್ವಜ್ಞನಾಗಿಯೂ ಸರ್ವವಿದನಾಗಿಯೂ ಇರುವನೋ, ಯಾರ ಜ್ಞಾನವು ನಿರಂತರ ತಪಸ್ಸಾಧನೆಯ ಫಲವೋ ಅವನಿಂದ ಈ ಪ್ರಪಂಚದಲ್ಲಿ ಅನ್ನವೆಂಬ ನಾಮ ರೂಪದಲ್ಲಿ ಬ್ರಹ್ಮನು ಹುಟ್ಟಿರುತ್ತಾನೆ.

ದ್ವಿತೀಯಖಂಡಃ

ತದೇತತ್ ಸತ್ಯಂ—

ಮನ್ತ್ರೇಷು ಕರ್ಮಾಣಿ ಕವಯೋ ಯಾನ್ಯಪಶ್ಯಂ ।
ಸ್ತಾನಿತ್ರೇತಾಯಾಂ ಬಹುಧಾ ಸನ್ತತಾನಿ ।
ತಾನ್ಯಾಚರಥ ನಿಯತಂ ಸತ್ಯಕಾಮಾ
ಏಷವಃ ಪಂಥಾಸ್ಸುಕೃತಸ್ಯ ಲೋಕೇ ॥೧॥

'ಆ' ಇದೇ ಸತ್ಯ. ಸರ್ವಕರ್ಮಗಳಿಗೂ ಮಂತ್ರ. ಹಿಂದಿನ ಋಷಿಗಳು ತ್ರೇತಾಯುಗದಲ್ಲಿ ಎತ್ತಿ ಹಿಡಿದ ವೇದಗಳು ಅನೇಕವಿಧವಾಗಿ ಹರಡಿಕೊಂಡಿದೆ. ಆದ್ದರಿಂದ ಭಕ್ತಿಶ್ರದ್ಧೆಗಳಿಂದಲೂ ಯಾವ ಆಶೆ ಆಕಾಂಕ್ಷೆಗಳಿಲ್ಲದೆಯೂ, ಸತ್ಯಮಾರ್ಗಗಳಿಂದ ಕರ್ಮವನ್ನು ಮಾಡು. ಇದೇ ಸುಕೃತವನ್ನೂ ದೇವತ್ವವನ್ನೂ ಪಡೆಯುವ ಮಾರ್ಗ.

ಯದಾ ಲೇಲಾಯತೇ ಹ್ಯರ್ಚಿಃ ಸಮಿದ್ಧೇ ಹವ್ಯವಾಹನೇ ।
ತದಾಜ್ಯಭಾಗಾವನ್ತರೇಣಾಹುತೀಃ ಪ್ರತಿಪಾದಯೇಚ್ಛ್ರದ್ಧ
ಯಾಹುತಂ ॥೨॥

ಯಾವ ಕಾಲದಲ್ಲಿ ಸಮಿಧೆಗಳನ್ನು ಹಾಕಿ ಅಗ್ನಿಯನ್ನು ಪ್ರತಿಷ್ಠಿಸಲು ಅಗ್ನಿಯು ತನ್ನ ಸರ್ವತೇಜಸ್ಸಿನಿಂದ ಹೊರಬರುತ್ತಾನೋ ಆಗ ಪರಿಶುದ್ಧಾತ್ಮನಾಗಿ ತುಪ್ಪದ ಜೊತೆಗೆ ನಿನ್ನ ಶ್ರದ್ಧೆಯನ್ನೂ ಸೇರಿಸಿ ಆಹುತಿಯನ್ನರ್ಪಿಸು.

ಯಸ್ಯಾಗ್ನಿಹೋತ್ರಮದರ್ಶಮಪೌರ್ಣಮಾಸ
ಮಚಾತುರ್ಮಾಸ್ಯಮನಾಗ್ರಯಣಮತಿಥಿವರ್ಜಿತಂ ಚ ।
ಅಹುತಮವೈಶ್ವದೇವಮವಿಧಿನಾ ಹುತ
ಮಾಸಪ್ತಮಾಂಸ್ತಸ್ಯ ಲೋಕಾನ್ ಹಿನಸ್ತಿ ॥೩॥

ಯಾರ ಅಗ್ನಿಹೋತ್ರ ಕ್ರಮಗಳು ನಿಲ್ಲಿಸಲ್ಪಟ್ಟು ಪ್ರತಿ ಪೌರ್ಣಮಿಗಳಲ್ಲೂ, ಅಮಾವಾಸ್ಯೆಗಳಲ್ಲೂ. ಚಾತುರ್ಮಾಸ್ಯಗಳಲ್ಲೂ, ಅಗ್ರಯಾಣಕಾಲ

ದಲ್ಲೂ, ಆಚರಿಸಬೇಕಾದ ಹವನ ಹೋಮಾದಿಗಳನ್ನು ಮಾಡದೆಯೂ, ಶ್ರದ್ಧಾಭಕ್ತಿಯಿಂದ ಅತಿಥಿಗಳನ್ನು ತೃಪ್ತಿಪಡಿಸದೆಯೂ, ವೈಶ್ವದೇವ ಬಲಿಹರಣಗಳನ್ನು ಕೊಡದೆಯೂ ಇರುವವರಿಗೆ ಏಳು ತಲೆಯವರಗೆ ಅವರ ಸುಕೃತಫಲವು ಹಾಳಾಗುತ್ತದೆ.

**ಕಾಳೀ ಕರಾಳೀ ಚ ಮನೋಜವಾ ಚ**
**ಸುಲೋಹಿತಾಯಚ ಸುಧೂಮ್ರವರ್ಣಾ ।**
**ಸ್ಫುಲಿಂಗಿನೀ ವಿಶ್ವರುಚೀ ಚ ದೇವೀ**
**ಲೇಲಾಯಮಾನಾ ಇತಿ ಸಪ್ತ ಜಿಹ್ವಾ ॥೪॥**

ಕರಿಯಬಣ್ಣದ ಕಾಲೀ, ಭಯಂಕರಳಾದ ಕರಾಲೀ, ಚತುರಳಾದ ಮನೋಜವ, ಕೆಂಪುಬಣ್ಣದ ಸುಲೋಹಿತ, ಸುಧೂಮ್ರವರ್ಣ, ಹೊಗೆಯ ಆಕಾರದ ಸ್ಫುಲಿಂಗಿನಿ, ಹಾರುವ ಕಿಡಿಗಳುಳ್ಳ ವಿಶ್ವರುಚಿ, ಎಂಬ ಏಳು ನಾಲಗೆಗಳು ಅಗ್ನಿದೇವನಿಗೆ ಇರುತ್ತವೆ.

**ಏತೇಷು ಯಶ್ಚರತೇ ಭ್ರಾಜಮಾನೇಷು**
**ಯಥಾ ಕಾಲಂ ಚಾಹುತಯೋ ಹ್ಯಾದದಾಯನ್ ।**
**ತಃ ನಯಂತ್ಯೇತಾಃ ಸೂರ್ಯಸ್ಯ ರಶ್ಮಯೋ**
**ಯತ್ರ ದೇವಾನಾಂ ಪತಿರೇಕೋಽಧಿವಾಸ ॥೫॥**

ಯಾರು ಸಪ್ತಜಿಹ್ವೆಗಳಿಂದ ಕೂಡಿದ ಅಗ್ನಿಯು ಪ್ರಜ್ವಲಿಸುತ್ತಿರುವಾಗ ವಿಧಿವತ್ತಾದ ಕರ್ಮಗಳನ್ನು ಸಕಾಲದಲ್ಲಿ ಆಚರಿಸುವರೋ ಅವರಿಗೆ ಅವರ ಯಜ್ಞಪ್ರಭೆಯು ದಾರಿತೋರಿಸಿ ಆಹುತಿಗಳು ಸೂರ್ಯರಶ್ಮಿಗಳಾಗಿ ಆ ಹಿರಣ್ಯಗರ್ಭನು ಎಲ್ಲಿ ಅಧಿಪತಿಯಾಗಿರುವನೋ ಅಲ್ಲಿಗೆ ಒಯ್ಯುವುವು.

**ಏಹ್ಯೇಹೀತಿ ತಮಾಹುತಯಃ ಸುವರ್ಚಸಃ**
**ಸೂರ್ಯಸ್ಯರಶ್ಮಿಭಿರ್ಯಜಮಾನಂ ವಹಂತಿ ।**
**ಪ್ರಿಯಾಂ ವಾಚಮಭಿವದಂತ್ಯೋಽರ್ಚಯಂತ್ಯ**
**ಏಷವಃ ಪುಣ್ಯಸ್ಸುಕೃತೋ ಬ್ರಹ್ಮಲೋಕಃ ॥೬॥**

ಮೇಲ್ಕಂಡಂತೆ ಹೋಮಗಳನ್ನಾಚರಿಸುವವನನ್ನು ಅಗ್ನಿಯಜ್ವಾಲೆಗಳು "ನಮ್ಮ ಜೊತೆಯಲ್ಲಿ ಬಾ" ಎಂದು ಕರೆಯುತ್ತ ಸೂರ್ಯ ರಶ್ಮಿಗಳೊಡನೆ ಮಿಶ್ರವಾಗಿ ಹಿತಮಿತವಾದ ಮಾತುಗಳನ್ನು ಆಪನಲ್ಲಿ ಆಡುತ್ತ ಅಭಿವಂದಿಸುತ್ತ "ಇದೇ ನಿನ್ನ ಪರಮಪವಿತ್ರವಾದ ಬ್ರಹ್ಮಲೋಕ, ನಿನ್ನ ಸುಕೃತವ ಸ್ವರ್ಗಲೋಕ" ಎಂದು ಹೇಳಿ ಅಲ್ಲಿಗೆ ಕರೆದೊಯ್ಯುತ್ತವೆ.

**ಪ್ಲವಾಹ್ಯೇತೇ ಅದೃಢಾ ಯಜ್ಞರೂಪಾ**
**ಅಷ್ಟಾದಶೋಕ್ತಮವರಂ ಯೇಷು ಕರ್ಮ ।**
**ಏತಚ್ಛ್ರೇಯೋ ಯೇಽಭಿನಂದಂತಿ ಮೂಢಾ**
**ಜರಾಮೃತ್ಯುಂ ತೇ ಪುನರೇವಾಪಿ ಯಂತಿ ॥೭॥**

ಮೂಢರು ಭಕ್ತಿವರ್ಜಿತರಾಗಿ ಆಚರಿಸುವ ಹದಿನೆಂಟು ಕರ್ಮಗಳೂ ಸುಲಭವಾಗಿ ವಿನಾಶಗೊಳ್ಳುತ್ತವೆ. ಅವರು ಚಲಿಸುವ ದೋಣಿಗಳೂ ಛಿದ್ರ ಛಿದ್ರವಾಗಿ ಅವರು ಆಚರಿಸುತ್ತಿರುವ ಕರ್ಮಗಳೂ ಸಂಪೂರ್ಣ ಫಲದಾಯಕಗಳೆಂದು ಭಾವಿಸಿದ್ದೆಲ್ಲವೂ ವಿಫಲವಾಗಿ ಅವರು ಜರಾಮರಣಗಳ ಲೋಕಕ್ಕೆ ಮರಳುತ್ತಾರೆ.

**ಅವಿದ್ಯಾಯಾಮಂತರೇ ವರ್ತಮಾನಾಃ**
**ಸ್ವಯಂಧೀರಾಃ ಪಂಡಿತಂ ಮನ್ಯಮಾನಾಃ ।**
**ಜಂಘನ್ಯಮಾನಾಃ ಪರಿಯಂತಿ ಮೂಢಾಃ**
**ಅಂಧೇನೈವ ನೀಯಮಾನಾ ಯಥಾಂಧಾಃ ॥೮॥**

ಅವಿದ್ಯಾವಂತರಾದ ಕೆಲವರು ಅಜ್ಞಾನದಲ್ಲಿ ಮುಳುಗಿ ತಾವು ಮಹಾ ಪಂಡಿತರೆಂದು ಭಾವಿಸಿ ತಾವು ಯೋಗಿಗಳಿಗಿಂತ ಜ್ಞಾನಿಗಳೆಂದು ಅಲೆಯುವುದು ಕುರುಡನಿಂದ ಮಾರ್ಗದರ್ಶನ ಪಡೆಯುವ ಕುರುಡರಂತೆ ಸುತ್ತುತ್ತಿರುವರು.

ಅವಿದ್ಯಾಯಾಂ ಬಹುಧಾ ವರ್ತಮಾನಾ
ವಯಂಕೃತಾರ್ಥ ಇತ್ಯಭಿಮನ್ಯಂತಿ ಬಾಲಾಃ ।
ಯತ್ಕರ್ಮಿಣೋನಪ್ರವೇದಯಂತಿ ರಾಗಾತ್
ತೇನಾತುರಾಃ ಕ್ಷೀಣಲೋಕಾಶ್ಚ್ಯವಂತೇ ॥೯॥

ಅವರು ಅವಿದ್ಯೆಯ ಸಂಕೋಲೆಯಲ್ಲಿ ಸಿಕ್ಕಿದ್ದು ತಾವು ಇಚ್ಛಿಪಟ್ಟಿದ್ದ ಸ್ವರ್ಗವು ಸಿಕ್ಕಿವೆ ಎಂದು ಆ ಪಳಿಯರು ಹೇಳಿಕೊಳ್ಳುತ್ತಾರೆ. ಅವರು ಕರ್ಮಗಳನ್ನೆಸಗುವಾಗ ಅದರಲ್ಲೇ ಮಗ್ನರಾಗಿರುವುದರಿಂದ ಜ್ಞಾನವನ್ನು ಹೊಂದಿರುವುದಿಲ್ಲ. ಅವರ ಆತುರದಲ್ಲಿ ಅವರು ಪಡೆದೆವೆಂದ ಸಿದ್ಧಿಯು ಇಂದ್ರಿಯಗಳ ಮೂಲಕ ಕರಗಿಹೋಗಿ ಸ್ವರ್ಗದಿಂದ ಕೆಳಗೆ ಉರುಳುತ್ತಾರೆ.

ಇಷ್ಟಾಪೂರ್ತಂ ಮನ್ಯಮಾನಾವರಿಷ್ಠಂ
ನಾನ್ಯಚ್ಛ್ರೇಯೋ ವೇದಯಂತೇ ಪ್ರಮೂಢಾಃ ।
ನಾಕಸ್ಯ ಪೃಷ್ಠೇ ತೇ ಸುಕೃತೇಽನುಭೂತ್ವಾ
ಇಮಂ ಲೋಕಂ ಹೀನತರಂ ವಾ ವಿಶಂತಿ ॥೧೦॥

ಇಷ್ಟಾಪೂರ್ತಗಳನ್ನು ಸರ್ವ ಪುರುಷಾರ್ಥಸಾಧನವೆಂದು ತಿಳಿಯುವರಾಗಿ ಮೂಢರು ಬೇರೆ ಯಾವ ಶ್ರೇಯಃಸಾಧನವನ್ನೂ ತಿಳಿಯುವುದಿಲ್ಲ ಅವರು ಸುಕೃತಸಾಧ್ಯವಾದ ಸ್ವರ್ಗವ ಮೇಲೆ ಕರ್ಮಫಲವನ್ನನುಭವಿಸಿ ಅನಂತರ ಈ ಮನುಷ್ಯ ಲೋಕವನ್ನೋ ಅಥವಾ ಅದಕ್ಕಿಂತ ಹೀನತರವಾದ ಮತ್ಯಾವಲೋಕವನ್ನೋ ಪ್ರವೇಶಿಸುವರು.

ತಪಃಶ್ರದ್ಧೇ ಯೇ ಹ್ಯುಪವಸಂತ್ಯರಣ್ಯೇ
ಶಾಂತಾ ವಿದ್ವಾಂಸೋ ಭೈಕ್ಷಚರ್ಯಾಂ ಚರಂತಃ ।
ಸೂರ್ಯದ್ವಾರೇಣ ತೇ ವಿರಜಾಃ ಪ್ರಯಾಂತಿ ।
ಯತ್ರಾಮೃತಃ ಸ ಪುರುಷೋ ಹ್ಯವ್ಯಯಾತ್ಮಾ ॥೧೧॥

ಯಾರು ಸನ್ಯಾಸಿಗಳಾಗಿ ಶ್ರವಣ ಮನನಗಳನ್ನು ಮಾಡಿ, ಕಠಿಣ ನಿಯಮದಿಂದಿದ್ದು, ವನವಾಸಮಾಡುತ್ತ, ಬ್ರಹ್ಮನನ್ನು ಮತ್ತು ತದ್ವಿಷಯದ

ಶ್ರದ್ಧೆಯಿನ್ನು ಸೇವಿಸುವರೋ, ಅವರು ಪಾಪಮುಕ್ತರಾಗಿ ಸೂರ್ಯಮಂಡಲವನ್ನು ಬೇಧಿಸಿಕೊಂಡು ಅಮೃತಸ್ವರೂಪನೂ ಅವ್ಯಯನೂ ಆದ ಪುರುಷನು ಎಲ್ಲಿರುವನೋ ಅಲ್ಲಿಗೆ ಹೋಗುತ್ತಾರೆ,

**ಪರೀಕ್ಷ್ಯ ಲೋಕಾನ್ ಕರ್ಮಚಿತಾನ್ ಬ್ರಾಹ್ಮಣೋ**
**ನಿರ್ವೇದಮಾಯಾನ್ನಾಸ್ತ್ಯಕೃತಃ ಕೃತೇನ ।**
**ತದ್ವಿಜ್ಞಾನಾರ್ಥಂ ಸಗುರುಮೇವಾಭಿಗಚ್ಛೇತ್**
**ಸಮಿತ್ಪಾಣಿಃ ಶ್ರೋತ್ರಿಯಂ ಬ್ರಹ್ಮನಿಷ್ಠಂ ॥೧೨॥**

ಬ್ರಹ್ಮನನ್ನು ಹುಡುಕಬಯಸುವರು ಅನೇಕ ಪರೀಕ್ಷೆಗಳಿಗೆ ಒಳಗಾಗುತ್ತಾರೆ. ಈ ಪ್ರಪಂಚದಲ್ಲಿರುವ ಎಲ್ಲ ಕರ್ಮಗಳನ್ನೂ ಆಚರಿಸಬೇಕಾಗುತ್ತದೆ ಮತ್ತು ಅವುಗಳಲ್ಲಿನ ರುಚಿ ಮತ್ತು ಲಾಲಸೆಗಳನ್ನು ತೊರೆಯಬೇಕಾಗುತ್ತದೆ. ಕೈಯ್ಯಲ್ಲಿ ಅಗ್ನಿ ಮತ್ತು ಸಮಿತ್ತುಗಳನ್ನು ಹಿಡಿದುಕೊಂಡು ಬ್ರಹ್ಮನಿಷ್ಠನಾದ ಗುರುವನ್ನು ಹುಡುಕಿಕೊಂಡು ಹೋಗಬೇಕಾಗುತ್ತದೆ.

**ತಸ್ಮೈ ಸ ವಿದ್ವಾನುಪಸನ್ನಾಯ ಸಮ್ಯಕ್**
**ಪ್ರಶಾಂತ ಚಿತ್ತಾಯ ಶಮಾನ್ವಿತಾಯ ।**
**ಯೇನಾಕ್ಷರಂ ಪುರುಷಂ ವೇದ ಸತ್ಯಂ**
**ಪ್ರೋವಾಚತಾಂ ತತ್ತ್ವತೋ ಬ್ರಹ್ಯವಿದ್ಯಾಂ ॥೧೩॥**

ಪ್ರಶಾಂತಚಿತ್ತನೂ. ಶಮಾನ್ವಿತನೂ. ಸರಿಯಾಗಿ ತನ್ನಲ್ಲಿಗೆ ಬಂದವನೂ ಆದ ಮೇಲ್ಕಂಡ ಅವನಿಗೆ ಆ ವಿದ್ವಾಂಸನಾದ ಗುರುವು ಯಾವ ಬ್ರಹ್ಮವಿದ್ಯೆಯಿಂದ ಅಕ್ಷರನೂ, ಸತ್ಯನೂ ಆದ ಪುರುಷನು ತಿಳಿದುಬರುವನೋ, ಅದನ್ನು ತತ್ವತಃ ಅವನಿಗೆ ಉಪದೇಶಿಸಬೇಕು.

**ತದೇತತ್ ಸತ್ಯಂ—**

**ಯಥಾ ಸುದೀಪ್ತಾತ್ ಪಾವಕಾದ್ವಿಸ್ಫುಲಿಂಗಾಃ**
**ಸಹಸ್ರಶಃ ಪ್ರಭವಂತೇ ಸರೂಪಾಃ ।**
**ತಥಾಕ್ಷರಾದ್ವಿವಿಧಾಃ ಸೋಮ್ಯಭಾವಾಃ**
**ಪ್ರಜಾಯಂತೇ ತತ್ರ ಚೈವಾಪಿಯಂತಿ ॥೧॥**

'ಆ' ಇದು ಸತ್ಯ. ಯಾವ ರೀತಿಯಾಗಿ ಜಾಜ್ವಲ್ಯಮಾನವಾದ ಅಗ್ನಿಯಿಂದ ಸಾವಿರಾರು ಒಂದೇ ರೂಪವುಳ್ಳ ಕಿಡಿಗಳು ಹೊರಬರುತ್ತವೋ ಮತ್ತು ಅಗ್ನಿಯಂತೆಯೇ ಇರುತ್ತವೆಯೋ ಅದೇರೀತಿ ಬದಲಾಗದ ನಾನಾ ವಿಧಗಳುಳ್ಳ ಅಕ್ಷರದಿಂದ ಅದರಂತಿರುವ ವಿವಿಧ ಕಾರ್ಯವಸ್ತುಗಳು ಉತ್ಪನ್ನ ವಾಗಿ ಅದರಲ್ಲೇ ಲೀನವಾಗುವುವು.

**ದಿವ್ಯೋಹ್ಯಮೂರ್ತಃ ಪುರುಷಃ ಸಬಾಹ್ಯಾಭ್ಯಂತರೋ ಹ್ಯಜಃ ।**
**ಅಪ್ರಾಣೋಹ್ಯಮನಾಃ ಶುಭ್ರೋಹ್ಯಕ್ಷರಾತ್ಪರತಃ ಪರಃ ॥೨॥**

ದಿವ್ಯನೂ ಅಮೂರ್ತನೂ, ಬಾಹ್ಯ ಮತ್ತು ಅಂತರವ್ಯಾಪ್ತನೂ, ಅಜನೂ, ಪ್ರಾಣ ಮತ್ತು ಮನಸ್ಸುಗಳಿಲ್ಲದವನೂ, ಶುಭ್ರನೂ, ಆದ ಆ ಪುರುಷನು ಅವ್ಯಾಕೃತ ಪ್ರಕೃತಿಗಿಂತ ಅಧಿಕನಾದ ಸಮಷ್ಟಿಪುರುಷನಿಗಿಂತ ಅಧಿಕನಾಗಿರುತ್ತಾನೆ.

**ಏತಸ್ಮಾಜ್ಜಾಯತೇ ಪ್ರಾಣೋ ಮನಸ್ಸರ್ವೇಂದ್ರಿಯಾಣಿಚ ।**
**ಖಂ ವಾಯುರ್ಜ್ಯೋತಿರಾಪಃ ಪೃಥ್ವೀ ವಿಶ್ವಸ್ಯ ಧಾರಿಣೀ ॥೩॥**

ಪ್ರಾಣ, ಮನಸ್ಸು, ಸರ್ವೇಂದ್ರಿಯಗಳೂ ಅವನಿಂದ ಜನಿತವಾದುವು. ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಾದಿ ಪಂಚಭೂತಗಳೂ ಮತ್ತು ಪ್ರಪಂಚವನ್ನು ಭರಿಸಿರುವ ಪೃಥ್ವಿ ಇವೆಲ್ಲವೂ ಅವನಿಂದ ಹುಟ್ಟಿವೆ.

**ಅಗ್ನಿರ್ಮೂರ್ಧಾ ಚಕ್ಷುಷೀ ಚಂದ್ರಃ ಸೂರ್ಯೌ**
**ದಿಶಃ ಶ್ರೋತ್ರೇ ವಾಗ್ವಿವೃತಾಶ್ಚ ವೇದಾಃ ।**
**ವಾಯುಃ ಪ್ರಾಣೋ ಹೃದಯಂ ವಿಶ್ವಮಸ್ಯ**
**ಪದ್ಭ್ಯಾಂ ಪೃಥಿವೀ ಹ್ಯೇಷ ಸರ್ವಭೂತಾಂತರಾತ್ಮಾ ॥೪॥**

ಆ ಪರಪುರುಷನಿಗೆ ಅಗ್ನಿಯೇ ತಲೆ, ಚಂದ್ರ ಸೂರ್ಯರೇ ಕಣ್ಣುಗಳು, ದಿಕ್ಕುಗಳು ಅವನ ಕಿವಿಗಳು, ಪವಿತ್ರವಾದ ವೇದಗಳೇ ಅವನ ವಾಕ್ಕು, ವಾಯುವೇ ಅವನ ಪ್ರಾಣ, ಪ್ರಪಂಚವೇ ಅವನ ಹೃದಯ. ಭೂಮಿಯು ಅವನ ಚರಣದಾಸಿ, ಅವನೇ ಸರ್ವಭೂತಗಳಿಗೂ ಅಂತರಾತ್ಮ

**ತಸ್ಮಾದಗ್ನಿಃ ಸಮಿಧೋ ಯಸ್ಯ ಸೂರ್ಯಃ**
**ಸೋಮಾತ್ ಪರ್ಜನ್ಯ ಓಷಧಯಃ ಪೃಥಿವ್ಯಾಂ ।**
**ಪುಮಾನ್ ರೇತಃ ಸಿಂಚತಿ ಯೋಷಿತಾಯಾಂ**
**ಬಹ್ವೀಃ ಪ್ರಜಾಃ ಪುರುಷಾತ್ ಸಂಪ್ರಸೂತಾಃ ॥೫॥**

ಅವನಿಂದ ಸೂರ್ಯನನ್ನೇ ಇಂಧನವಾಗಿ ಉಳ್ಳ ದ್ಯುಲೋಕ, ಆ ದ್ಯುಲೋಕವೆಂಬ ಅಗ್ನಿಯಿಂದ ಸೋಮನು ಉತ್ಪನ್ನನಾದ. ಆ ಸೋಮನಿಂದ ಪರ್ಜನ್ಯರೂಪವಾದ ಅಗ್ನಿಯೂ, ಪರ್ಜನ್ಯನಿಂದ ಪೃಥ್ವೀ ರೂಪವಲ್ಲಿ ಔಷಧಿಗಳು ಹುಟ್ಟಿದವು. ಈ ಔಷಧಿಗಳು ಪುರುಷರೂಪನಾದ ಅಗ್ನಿಯಲ್ಲಿ ಹುತವಾಗಲು ಆ ಅಗ್ನಿಯು ಯೋನಿರೂಪವಾದ ಅಗ್ನಿಯಲ್ಲಿ ರೇತಸ್ಸನ್ನು ವಿಸರ್ಜಿಸಲು ಬಹು ಪ್ರಜೆಗಳು ಆ ಪರಮಪುರುಷನಿಂದ ಜನಿಸಿದರು.

**ತಸ್ಮಾದೃಚಃ ಸಾಮಯಜೂಂಷಿ ದೀಕ್ಷಾ**
**ಯಜ್ಞಾಶ್ಚ ಸರ್ವೇ ಕ್ರತವೋ ದಕ್ಷಿಣಾಶ್ಚ ।**
**ಸಂವತ್ಸರಂಚ ಯಜಮಾನಶ್ಚ ಲೋಕಾಃ**
**ಸೋಮೋ ಯತ್ರ ಪವತೇ ಯತ್ರ ಸೂರ್ಯಃ ॥೬॥**

ಅವನಿಂದಲೇ ಋಗ್ವೇದ, ಯಜುರ್ವೇದ, ಸಾಮವೇದಗಳೂ, ದೀಕ್ಷೆ ಮತ್ತು ಎಲ್ಲ ಯಜ್ಞ ಯಾಗಾದಿ ಕರ್ಮಗಳೂ, ಸಂಭಾವನೆಯೂ, ಸಂವತ್ಸರವೂ

ಯಜಮಾನನೂ, ಈ ಲೋಕವೂ, ಅದರಮೇಲಿರುವ ಮತ್ತು ಪ್ರಕಾಶಿಸುತ್ತಿ ರುವ ಚಂದ್ರ ಸೂರ್ಯಾದಿಗಳೂ ಜನಿಸಿದರು.

**ತಸ್ಮಾಚ್ಚ ದೇವಾ ಬಹುಧಾ ಸಂಪ್ರಸೂತಾಃ**
**ಸಾಧ್ಯಾ ಮನುಷ್ಯಾಃ ಪಶವೋ ವಯಾಂಸಿ ।**
**ಪ್ರಾಣಾಪಾನೌ ವ್ರೀಹ ಯವೌ ತಪಶ್ಚ**
**ಶ್ರದ್ಧಾ ಸತ್ಯಂ ಬ್ರಹ್ಮಚರ್ಯಂ ವಿಧಿಶ್ಚ ॥೭॥**

ಅವನಿಂದಲೇ ಅನೇಕ ದೇವತೆಗಳು ಜನಿಸಿದ್ದಾರೆ. ಯಕ್ಷರೂ, ಮನುಷ್ಯರೂ, ಪಶುಪಕ್ಷಿಗಳೂ, ಪ್ರಾಣ ಮತ್ತು ಅಪಾನಗಳೂ, ಆಹಾರ ಗಳೂ, ತಪಸ್ಸು ಮತ್ತು ಶ್ರದ್ಧೆಯೂ, ಸತ್ಯ ಮತ್ತು ಬ್ರಹ್ಮಚರ್ಯೆಯೂ, ಇವನ್ನು ಆಚರಿಸುವ ಕ್ರಮಗಳು ಎಲ್ಲವೂ ಅವನಿಂದಲೇ ಉಂಟಾದವು.

**ಸಪ್ತಪ್ರಾಣಾಃ ಪ್ರಭವಂತಿ ತಸ್ಮಾತ್**
**ಸಪ್ತಾರ್ಚಿಷಃ ಸಮಿಧಃ ಸಪ್ತ ಹೋಮಾಃ ।**
**ಸಪ್ತ ಇಮೇ ಲೋಕಾ ಯೇಷು ಚರಂತಿ ಪ್ರಾಣಾ**
**ಗುಹಾಶಯಾ ನಿಹಿತಾಃ ಸಪ್ತ ಸಪ್ತ ॥೮॥**

ಏಳು ಪ್ರಾಣಗಳು ಅವನಿಂದ ಉಂಟಾದುವು. ಅವನಿಂದ ಸಪ್ತಾಗ್ನಿ ಗಳೂ, ಇಂಧನಗಳೂ, ಸಪ್ತ ಜಿಹ್ವೆಗಳೂ ಉಂಟಾಗುವುವು ; ಮತ್ತು ಯಾವ ಪ್ರಾಣಗಳು ಈ ಲೋಕದಲ್ಲಿ ಸಂಚರಿಸುವುವೋ, ಸುಷುಪ್ತಿಯಲ್ಲಿ ಹೃದಯ ಗುಹೆಯಲ್ಲಿ ಮಲಗಿದ್ದು ಅನಂತರ ತಮ್ಮ ತಮ್ಮ ಕಾರ್ಯಗಳಲ್ಲಿ ಪ್ರವೃತ್ತವಾ ಗುವ ಪ್ರಾಣಗಳೂ, ಸಪ್ತಲೋಕವೂ ಎಲ್ಲವೂ ಏಳು ಏಳರಂತೆ ಅವನಿಂದ ಉಂಟಾದುವು.

**ಅತಃ ಸಮುದ್ರಾ ಗಿರಯಶ್ಚ ಸರ್ವೇ**
**ಅಸ್ಮಾತ್ ಸ್ಯಂದಂತೇ ಸಿಂಧವಃ ಸರ್ವರೂಪಾಃ ।**
**ಅತಶ್ಚ ಸರ್ವಾ ಓಷಧಯೋ ರಸಶ್ಚ**
**ಯೇನೈಷ ಭೂತೈಸ್ತಿಷ್ಠತೇ ಹ್ಯಂತರಾತ್ಮಾ ॥೯॥**

ಇವನು ಎಲ್ಲಾ ಭೂತಗಳಲ್ಲೂ ಅಂತರಾತ್ಮನಾಗಿರುವುದರಿಂದ, ಸಮುದ್ರಗಳೂ, ಎಲ್ಲಾ ಪರ್ವತಗಳೂ, ಸಂಭವಿಸಿದವು. ನೀರು ಅನೇಕ ರೂಪದಲ್ಲಿ ಅನೇಕ ನದಿಗಳ ಮೂಲಕ ಹರಿಯುತ್ತವೆ ಅದರಿಂದ ಎಲ್ಲ ಪೈರು ಪಚ್ಚೆಗಳೂ, ರಸಪದಾರ್ಥಗಳೂ ಉಂಟಾಗುತ್ತವೆ

**ಪುರುಷ ಏವೇದಂ ವಿಶ್ವಂ ಕರ್ಮ**
**ತಪೋ ಬ್ರಹ್ಮ ಪರಾಮೃತಂ ।**
**ಏತದ್ಯೋ ವೇದ ನಿಹಿತಂ ಗುಹಾಯಾಂ**
**ಸೋಽವಿದ್ಯಾ ಗ್ರಂಥಿಂ ವಿಕಿರತೀಹ ಸೋಮ್ಯ ॥೧೦॥**

ಈ ಪ್ರಪಂಚವೆಲ್ಲವೂ ಆ ಮಹಾಪುರುಷನೇ, ಅವನೇ ಕರ್ಮ ತಪಸ್ಸು. ಮುಕ್ತಪುರುಷರಿಗೆ ಬ್ರಹ್ಮವೂ ಆ ಅಕ್ಷರಪುರುಷನೇ ಎಲೈ ಸೋಮಾರ್ಹನೇ ! ಈ ಲೋಕದಲ್ಲಿ ಹೃದಯವರ್ತಿಯಾದ ಈ ಅಕ್ಷರಬ್ರಹ್ಮನನ್ನು ಯಾರು ಅರಿಯುತ್ತಾರೆಯೋ ಅವರು ಗಂಟಿನಂತೆ ಬಿಡಿಸಲು ಕಷ್ಟವಾದ ಅವಿದ್ಯೆಯನ್ನು ಬಿಡಿಸಿಕೊಳ್ಳುವರು.

ದ್ವಿತೀಯ ಖಂಡಃ

**ಆವಿಃ ಸನ್ನಿಹಿತಂ ಗುಹಾ ಚರಂ ನಾಮ**
**ಮಹತ್ಪದಮತ್ರೈತತ್ ಸಮರ್ಪಿತಂ ।**
**ಏಜತ್ಪ್ರಾಣನ್ನಿಮಿಷಚ್ಚ ಯದೇತಜ್ಜಾನಥ ಸದ**
**ಸದ್ವರೇಣ್ಯಂ ಪರಂ ವಿಜ್ಞಾನಾದ್ಯದ್ವರಿಷ್ಠಂ ಪ್ರಜಾನಾಂ ॥೧॥**

ಆ ಪರಮಾತ್ಮನು ಹೃದಯಗಹ್ವರದಲ್ಲಿ ಸೇರಿದ್ದು ಪ್ರತಿಯೊಂದಕ್ಕೂ ಚೇತನವನ್ನು ಕೊಡುವ, ಪ್ರತ್ಯಕ್ಷನಾಗಿರುವ ಮತ್ತು ಅಭೇದ್ಯವಾದ ಅಡಿಪಾಯದಲ್ಲಿ ಸೇರಿದ್ದು ಪ್ರಾಣವಾಯುವಿಗೂ ನೋಟಕ್ಕೂ ಕಾರಣನಾಗಿದ್ದಾನೆ. ವಿಜ್ಞಾನಕ್ಕೆ ಸಿಲುಕದ, ಅತ್ಯುಚ್ಚನಾದ, ಪರಮಶ್ರೇಷ್ಠನಾದ, ಉಂಟು—ಇಲ್ಲ ಎಂದೂ ಊಹಿಸಲಾರದ ಗಟ್ಟಿ ಬುನಾದಿಯಲ್ಲಿ ಸೇರಿಕೊಂಡಿರುವವನೂ ಅವನೇ.

ಯದರ್ಚಿಮದ್ಯದಣುಭ್ಯೋಽಣು ಚ
ಯಸ್ಮಿನ್ ಲೋಕಾ ನಿಹಿತಾ ಲೋಕಿನಶ್ಚ ।
ತದೇತದಕ್ಷರಂ ಬ್ರಹ್ಮ ಸಪ್ರಾಣಸ್ತದುವಾಙ್ಮನಃ
ತದೇತತ್ಸತ್ಯಂ ತದಮೃತಂ ತದ್ವೇದ್ಧವ್ಯಂ ಸೋಮ್ಯವಿದ್ಧಿ ॥೨॥

ಯಾವುದು ಪ್ರಕಾಶಮಾನವಾಗಿದೆಯೋ, ಯಾವುದು ಅಣುವಿಗಿಂತಲೂ ಸೂಕ್ಷ್ಮವಾಗಿದೆಯೋ, ಯಾವುದರಲ್ಲಿ ಸಮಸ್ತ ಲೋಕಗಳೂ ಅಡಗಿವೆಯೋ ಆ ಅಕ್ಷರತತ್ತ್ವವೇ ಪರಬ್ರಹ್ಮ. ಅದೇ ಪ್ರಾಣ, ವಾಕ್ಕು ಮತ್ತು ಮನಸ್ಸು, ಅದೇ ಸತ್ಯ. ಅಮೃತ, ಅದರಲ್ಲೇ ಓ ಸೋಮ್ಯನೇ ನೀನು ಪ್ರವೇಶಿಸ ಬೇಕು ಮತ್ತು ಒಂದಾಗಬೇಕು.

ಧನುರ್ಗೃಹೀತ್ವೌಪನಿಷದಂ ಮಹಾಸ್ತ್ರಂ
ಶರಂ ಹ್ಯುಪಾಸಾನಿಶಿತಂ ಸಂಧೀಯತ ।
ಆಯಮ್ಯ ತದ್ಭಾವಗತೇನ ಚೇತಸಾ
ಲಕ್ಷ್ಯಂ ತದೇವಾಕ್ಷರಂ ಸೌಮ್ಯವಿದ್ಧಿ ॥೩॥

ಎಲೈ ಸೋಮ್ಯನೇ ಉಪನಿಷತ್ ಎಂಬ ಬಿಲ್ಲನ್ನು ತೆಗೆದುಕೋ ; ಆ ಮಹತ್ತರವಾದ ಬಿಲ್ಲಿಗೆ ಆರಾಧನೆಯಿಂದ ಹರಿತಮಾಡಿದ ಬಾಣವನ್ನು ಅನು ಸಂಧಾನುಮಾಡು ; ಆ ಪರಮಾತ್ಮನನ್ನು ತಿಳಿದುಕೊಳ್ಳುವ ಮಹತ್ವಾಕಾಂಕ್ಷೆ ಎಂಬ ಗುರಿಯನ್ನಿಟ್ಟುಕೋ ; ಬಿಲ್ಲನ್ನು ಎಳೆದು ಈ ಗುರಿಯನ್ನು ಸಾಧಿಸಲು ಬಾಣವನ್ನು ಬಿಡು.

ಪ್ರಣವೋ ಧನುಃ ಶರೋಹ್ಯಾತ್ಮಾ ಬ್ರಹ್ಮತಲ್ಲಕ್ಷ್ಯಮುಚ್ಯತೇ ।
ಅಪ್ರಮತ್ತೇನ ವೇದ್ಧವ್ಯಂ ಶರವತ್ತನ್ಮಯೋ ಭವೇತ್ ॥೪॥

ಓಂಕಾರಪ್ರಣವವೇ ಧನುಸ್ಸು, ಜೀವಾತ್ಮನೇ ಬಾಣ, ಬ್ರಹ್ಮಜ್ಞಾನ ವೆಂಬುದೇ ಗುರಿ, ಇದನ್ನು ತಪ್ಪದೇ ಪ್ರಯೋಗಮಾಡು. ಯಾವ ರೀತಿ ಬಿಟ್ಟ ಬಾಣವು ಅದರ ಗುರಿಯಲ್ಲಿ ಐಕ್ಯವಾಗುವುದೋ ಹಾಗೆ ನೀನೂ ಪರ ಮಾತ್ಮನಲ್ಲಿ ಐಕ್ಯವಾಗಬೇಕು.

**ಯಸ್ಮಿನ್ ದ್ಯೌಃ ಪೃಥಿವೀಚಾಂತರಿಕ್ಷ**
**ಮೋತಂ ಮನಸಸ್ಸಹ ಪ್ರಾಣೈಶ್ಚ ಸರ್ವೈಃ ।**
**ತಮೇವೈಕಂ ಜಾನಥಾತ್ಮನ**
**ಮನ್ಯವಾಚೋ ವಿಮುಂಚಥ ಅಮೃತಸ್ಯೈಷ ಸೇತುಃ ॥೫॥**

ಯಾರಲ್ಲಿ ಸ್ವರ್ಗಲೋಕ ಮತ್ತು ಭೂಲೋಕಗಳು ಹೆಣೆದುಕೊಂಡಿವೆಯೋ; ಹೇಗೆ ಅಂತರಿಕ್ಷ ಮತ್ತು ಮನಸ್ಸು ತಮ್ಮೆಲ್ಲ ಪ್ರಾಣಗಳ ಸಹಿತ ಯಾರಲ್ಲಿ ಹೊಂದಿಕೊಂಡಿವೆಯೋ; ಅವನನ್ನು ಸರ್ವಾತ್ಮನೆಂದು ಭಾವಿಸು. ಆಗ ಇತರ ಲೋಕಗಳ ಮಾತೂ ಇಲ್ಲವಾಗುವುವು. ಇದೇ ಅಮರತ್ವವನ್ನು ಹೊಂದುವ ಸೇತುವೆ.

**ಅರಾ ಇವ ರಥನಾಭೌ ಸಂಹತಾ ಯತ್ರ ನಾಡ್ಯಃ**
**ಸ ಏಷೋಽಂತಶ್ಚರತೇ ಬಹುಧಾ ಜಾಯಮಾನಃ ।**
**ಓಮಿತ್ಯೇವಂ ಧ್ಯಾಯ ಯಥಾತ್ಮಾನಂ**
**ಸ್ವಸ್ತಿ ವಃ ಪರಾಯ ತಮಸಃ ಪರಸ್ತಾತ್ ॥೬॥**

ಯಾವ ರೀತಿ ರಥಚಕ್ರದಲ್ಲಿ ಆರೇಕಾಲುಗಳು ಕುಂಭದಲ್ಲಿ ಸೇರಿರುತ್ತವೆಯೋ ಹಾಗೆ ಹೃದಯದಲ್ಲಿ ನಾಡಿಗಳೆಲ್ಲಪೂ ಸೇರಿರುತ್ತವೆ. ಬಹುವಿಧವಾಗಿ ಹುಟ್ಟುವ ಅವನು ಹೃದಯದಲ್ಲಿ ಅಡಗಿರುತ್ತಾನೆ. ಓಂ ಎಂದು ಆತ್ಮನನ್ನು ಧ್ಯಾನಮಾಡು. ತಮಸ್ಸಿಗಿಂತ ಆಚೆ ಇರುವ ನಿನ್ನ ಗುರಿಯನ್ನು ಸೇರು. ಹಾಗೆ ಮಾಡಿರಿ, ನಿಮಗೆ ಮಂಗಳವಾಗಲಿ.

**ಯಃ ಸರ್ವಜ್ಞಃ ಸರ್ವವಿದ್ಯಸ್ಯೈಷ ಮಹಿಮಾ ಭುವಿ ।**
**ದಿವ್ಯೇ ಬ್ರಹ್ಮಪುರೇ ಹ್ಯೇಷ ವ್ಯೋಮನ್ಯಾತ್ಮಾ ಪ್ರತಿಷ್ಠಿತಃ ॥೭॥**

ಸರ್ವಜ್ಞನಾದ ಸರ್ವವಿದನಾದ ಆ ಪರಮಾತ್ಮನು ಹೇಗೆ ಈ ಭೂಮಿಯ ಮೇಲೆ ತನ್ನ ದಿವ್ಯವಾದ ಮತ್ತು ಭವ್ಯವಾದ ಪ್ರಭಾವದಿಂದಿರುವನೋ ಹಾಗೆಯೇ ಬ್ರಹ್ಮಪುರವಾದ ದಿವ್ಯ ವ್ಯೋಮದಲ್ಲಿಯೂ ನೆಲೆಸಿರುವನು,

**ಮನೋಮಯಃ ಪ್ರಾಣ ಶರೀರ ನೇತಾ**
**ಪ್ರತಿಷ್ಠಿತೋಽನ್ನೇ ಹೃದಯಂ ಸನ್ನಿಧಾಯ ।**
**ತದ್ವಿಜ್ಞಾನೇನ ಪರಿಪಶ್ಯಂತಿ ಧೀರಾ**
**ಆನಂದರೂಪಮಮೃತಂ ಯದ್ವಿಭಾತಿ ॥೮॥**

ವಿಶುದ್ಧವಾದ ಮನಸ್ಸಿನಿಂದ ಗ್ರಾಹ್ಯನೂ, ಪ್ರಾಣವನ್ನು ಶರೀರವಾ ಉಳ್ಳವನೂ, ಸರ್ವನೇತೃವೂ ; ಅನ್ನವಿಕಾರದ ಶರೀರದಲ್ಲಿ ನೆಲೆಸಿರುವವನೂ, ಆನಂದರೂಪನಾಗಿ ಮತ್ತು ಅಮೃತನಾಗಿ ಪ್ರಕಾಶಿಸುವವನೂ ಆದ ಬ್ರಹ್ಮನಲ್ಲಿ ಹೃದಯವನ್ನು ನಿಲ್ಲಿಸಿ ಪ್ರಜ್ಞಾಶಾಲಿಗಳು ಉಪಾಸನೆಯಿಂದ ಅವನನ್ನು ಸಾಕ್ಷಾತ್ಕರಿಸಿಕೊಳ್ಳುವರು.

**ಭಿದ್ಯತೇ ಹೃದಯಗ್ರಂಥಿಶ್ಛಿದ್ಯಂತೇ ಸರ್ವಸಂಶಯಾಃ ।**
**ಕ್ಷೀಯಂತೇಚಾಸ್ಯ ಕರ್ಮಾಣಿ ತಸ್ಮಿನ್ ದೃಷ್ಟೇ ಪರಾವರೇ ॥೯॥**

ಸರ್ವೋತ್ಕೃಷ್ಟರಾದವರೂ ಯಾರಿಗೆ ನಿಕೃಷ್ಟರೋ ಅಂತಹ ಆ ಪರಮಾತ್ಮನನ್ನು ದರ್ಶನಮಾಡಿದಲ್ಲಿ ಹೃದಯಗ್ರಂಥಿಗಳು ತುಂಡು ತುಂಡಾಗಿ ಸರ್ವ ಸಂದೇಹಗಳೂ ಕತ್ತರಿಸಿಹೋಗುವುವು. ಇವನ ಸರ್ವಕರ್ಮಗಳೂ ಕ್ಷಯ ಹೊಂದುವುವು.

**ಹಿರಣ್ಮಯೇ ಪರೇ ಕೋಶೇ ವಿರಜಂ ಬ್ರಹ್ಮ ನಿಷ್ಕಲಂ ।**
**ತಚ್ಛುಭ್ರಂ ಜ್ಯೋತಿಷಾಂ ಜ್ಯೋತಿಸ್ತದ್ಯದಾತ್ಮ ವಿದೋವಿದುಃ**
**॥೧೦॥**

ಯಾವ ಪರತತ್ವವು ಭಂಗಾರದ ಕೋಶದಲ್ಲಿ ಅಡಗಿರುವುದೋ, ಯಾವುದು ರಜಸ್ಸಿನ ಸಂಪರ್ಕವಿಲ್ಲದಿರುವುದೋ, ಯಾವುದು ನಿರವಯವವೋ ಆ ಶುಭ್ರವಾದ ಜ್ಯೋತಿಗಳ ಜ್ಯೋತಿಯನ್ನು ಆತ್ಮಜ್ಞಾನಿಗಳು ತಿಳಿಯುವರು.

**ನ ತತ್ರ ಸೂರ್ಯೋ ಭಾತಿ ನ ಚಂದ್ರ ತಾರಕಃ**
**ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ।**
**ತಮೇವ ಭಾಂತಮನುಭಾತಿ ಸರ್ವಂ**
**ತಸ್ಯ ಭಾಸಾ ಸರ್ವಮಿದಂ ವಿಭಾತಿ ॥೧೧॥**

ಅಲ್ಲಿ ಸೂರ್ಯನು ಪ್ರಕಾಶಿಸುವುದಿಲ್ಲ, ಚಂದ್ರನ ತಂಪೂ ಇರುವುದಿಲ್ಲ, ನಕ್ಷತ್ರಗಳು ಕುರುಡಾಗಿರುತ್ತವೆ. ಅಲ್ಲಿ ಈ ವಿದ್ಯುತ್ತುಗಳು ಬೆಳಗುವುದಿಲ್ಲ. ಆದ್ದರಿಂದ ಅಗ್ನಿಯು ಅಲ್ಲಿ ಹೇಗೆ ಜ್ವಲಿಸಬೇಕು ? ಅಲ್ಲಿ ಪ್ರಕಾಶಿಸುವುದೆಲ್ಲಾ ಆ ಪರಮಾತ್ಮನ ನೆರಳಿನ ಬೆಳಕು ಮಾತ್ರ. ಅವನ ಪ್ರಕಾಶದಿಂದ ಜಗತ್ತೆಲ್ಲವೂ ಪ್ರಕಾಶಿಸುವುದು.

**ಬ್ರಹ್ಮೈವೇದಮಮೃತಂ ಪುರಸ್ತಾತ್**
**ಬ್ರಹ್ಮ ಪಶ್ಚಾತ್ ಬ್ರಹ್ಮ ದಕ್ಷಿಣತಶ್ಚೋತ್ತರೇಣ ।**
**ಅಧಶ್ಚೋರ್ಧ್ವಂ ಚ ಪ್ರಸೃತಂ**
**ಬ್ರಹ್ಮೈವೇದಂ ವಿಶ್ವಮಿದಂ ವರಿಷ್ಠಂ ॥೧೨॥**

ಈ ಬ್ರಹ್ಮವೇದವೆಲ್ಲ ಅಮೃತಪ್ರಾಯವಾದುದು. ಬ್ರಹ್ಮನು ನಮ್ಮ ಮುಂದೂ ಇದ್ದಾನೆ, ಹಿಂದೂ ಇದ್ದಾನೆ, ನಮ್ಮ ಎಡಬಲಗಳಲ್ಲೂ ಇದ್ದಾನೆ, ಮೇಲೆ ಮತ್ತು ಕೆಳಗೂ ಇದ್ದಾನೆ. ಈ ವಿಶ್ವವೆಲ್ಲವೂ ಬ್ರಹ್ಮನ ಪ್ರಭುತ್ವದಲ್ಲೇ ಇದೆ.

ತೃತೀಯ ಮುಂಡಕ — ಪ್ರಥಮ ಖಂಡಃ

**ದ್ವಾ ಸುಪರ್ಣಾ ಸಯುಜಾ ಸಖಾಯಾ**
**ಸಮಾನಂ ವೃಕ್ಷಂ ಪರಿಷಸ್ವಜಾತೇ ।**
**ತಯೋರನ್ಯಃ ಪಿಪ್ಪಲಂ ಸ್ವಾದ್ವತ್ತ್ಯ**
**ನಶ್ನನ್ನನ್ಯೋ ಅಭಿಚಾಕಶೀತಿ ॥೧॥**

ಎರಡು ಪಕ್ಷಿಗಳು ಸುಂದರವಾದ ರೆಕ್ಕೆಗಳನ್ನು ಹೊಂದಿವೆ, ಅನ್ಯೋನ್ಯ ಮಿತ್ರತ್ವದಿಂದ ಇವೆ ಮತ್ತು ಒಂದೇ ಗಿಡದಮೇಲೆ ನೆಲೆಯಾಗಿವೆ. ಅವುಗಳ ಪೈಕಿ ಒಂದು ಪಕ್ಷಿ ಮಾತ್ರ ಆ ಗಿಡದ ರುಚಿಯಾದ ಹಣ್ಣನ್ನು ತಿನ್ನುತ್ತಿದೆ. ಇನ್ನೊಂದು ಏನೂ ತಿನ್ನದೆ ತನ್ನ ಜೊತೆಯ ಪಕ್ಷಿಯನ್ನು ನೋಡುತ್ತಿದೆ.

**ಸಮಾನೇ ವೃಕ್ಷೇ ಪುರುಷೋ ನಿಮಗ್ನೋ**
**ಅನೀಶಯಾ ಶೋಚತಿ ಮುಹ್ಯಮಾನಃ ।**
**ಜುಷ್ಟಂ ಯದಾ ಪಶ್ಯತ್ಯನ್ಯಮೀಶಮಸ್ಯ**
**ಮಹಿಮಾನಮಿತಿ ವೀತಶೋಕಃ ॥೨॥**

ಪುರುಷನು ಪ್ರಕೃತಿಯಿಂದ ಮೋಹಿತನಾಗಿ, ಅದೇ ವೃಕ್ಷದಲ್ಲಿ ನಿಮಗ್ನನಾಗಿ, ದುಃಖವನ್ನನುಭವಿಸುತ್ತಿರುವನು. ಯಾವಾಗ ಅವನು ತನಗಿಂತ ಬೇರೆಯಾದ ಮತ್ತು ಪ್ರೀತನಾಗಿರುವ ಈಶ್ವರನನ್ನೂ ಮತ್ತು ಅವನ ಮಹಿಮೆಯನ್ನೂ ನೋಡುವನೋ ಆಗ ಶೋಕರಹಿತನಾಗುವನು.

**ಯದಾಪಶ್ಯಃ ಪಶ್ಯತೇ ರುಕ್ಮವರ್ಣಂ**
**ಕರ್ತಾರಮೀಶಂ ಪುರುಷಂ ಬ್ರಹ್ಮಯೋನಿಂ ।**
**ತದಾ ವಿದ್ವಾನ್ ಪುಣ್ಯಪಾಪೇ ವಿಧೂಯ**
**ನಿರಂಜನಃ ಪರಮಂ ಸಾಮ್ಯಮುಪೈತಿ ॥೩॥**

ಯಾವಾಗ ಬ್ರಹ್ಮದರ್ಶಿಯಾದ ಪುರುಷನು ತನ್ನ ಕರ್ತಾರನಾದ ಭಂಗಾರದ ತೇಜಸ್ಸಿನುತಿರುವ ಕರ್ತೃವೂ, ಈಶ್ವರನೂ, ಕಾರಣಭೂತನೂ ಮತ್ತು ಬ್ರಹ್ಮನೂ ಆದ ಆ ಪರಮಪುರುಷನನ್ನು ನೋಡುವನೋ ಆಗ ಆ ವಿದ್ವಾಂಸನು ತನ್ನ ಪುಣ್ಯ ಪಾಪಗಳನ್ನು ತೊಲಗಿಸಿಕೊಂಡು ಪರಮಪದವನ್ನು ಹೊಂದುವನು.

**ಪ್ರಾಣೋ ಹ್ಯೇಷ ಯಃ ಸರ್ವಭೂತೈರ್ವಿಭಾತಿ**
**ವಿಜಾನನ್ ವಿದ್ವಾನ್ ಭವತಿ ನಾತಿವಾದೀ ।**
**ಆತ್ಮಕ್ರೀಡ ಆತ್ಮರತಿಃ ಕ್ರಿಯಾವಾನ್**
**ಏಷ ಬ್ರಹ್ಮವಿದಾಂ ವರಿಷ್ಠಃ ॥೪॥**

ಈ ಪ್ರಾಣನು ಸರ್ವಭೂತಗಳಿಂದಲೂ ಆಶ್ರಯಿಸಲ್ಪಟ್ಟು ಬೆಳಗುತ್ತಿರುವನು. ಆವನನ್ನು ತಿಳಿಯುವವನಾಗಿ, ಅವನನ್ನು ಕುರಿತು ಉಪಾಸನೆ ಮಾಡುವವನಾಗಿ, ಅವನಿಂದ ಅತಿವಾದಿಯಾಗದೆ, ಆತ್ಮಕ್ರೀಡನಾಗು, ಆತ್ಮರತಿಯಾಗು, ಕ್ರಿಯಾವಂತನಾಗು. ಕ್ರಿಯಾವಂತನು ಬ್ರಹ್ಮವಿದರಲ್ಲಿ ಶ್ರೇಷ್ಠನಾಗುತ್ತಾನೆ.

**ಸತ್ಯೇನ ಲಭ್ಯಸ್ತಪಸಾ ಹ್ಯೇಷ ಆತ್ಮಾ**
**ಸಂಯುಗ್ ಜ್ಞಾನೇನ ಬ್ರಹ್ಮಚರ್ಯೇಣ ನಿತ್ಯಂ ।**
**ಅಂತಃಶರೀರೇ ಜ್ಯೋತಿರ್ಮಯೋ ಹಿ ಶುಭ್ರೋ**
**ಯಂ ಪಶ್ಯಂತಿ ಯತಯಃ ಕ್ಷೀಣದೋಷಾಃ ॥೫॥**

ಸತ್ಯದಿಂದ ತಪಸ್ಸನ್ನು ಸಾಧಿಸಬಹುದು. ಆತ್ಮವು ಸಂಯಮಜ್ಞಾನದಿಂದಿದ್ದು ಬ್ರಹ್ಮಚರ್ಯವನ್ನು ಸಾಧಿಸಿದಲ್ಲಿ ಅಂತಃಶರೀರದಕಡೆಗೆ ತನ್ನ ದೃಷ್ಟಿಯನ್ನು ಹರಿಸಿ ಅಲ್ಲಿ ಜ್ಯೋತಿರ್ಮಯನಾಗಿಯೂ, ಪರಿಶುಭ್ರನಾಗಿಯೂ, ಸರ್ವದೋಷರಹಿತನಾಗಿಯೂ ಇರುವ ಪರಮಾತ್ಮನನ್ನು ಕಾಣುತ್ತಾನೆ.

**ಸತ್ಯಮೇವ ಜಯತೇ ನಾನೃತಂ**
**ಸತ್ಯೇನ ಪಂಥಾ ವಿತತೋ ದೇವಯಾನಃ ।**
**ಏನಾಕ್ರಮಂತ್ಯ ಋಷಯೋ ಹ್ಯಾಪ್ತಕಾಮಾಃ**
**ಯತ್ರ ತತ್ ಸತ್ಯಸ್ಯ ಪರಮಂ ನಿಧಾನಂ ॥೬॥**

ಯಾವಾಗಲೂ ಸತ್ಯವೇ ಜಯಿಸುತ್ತದೆ. ಸುಳ್ಳಲ್ಲ ಸತ್ಯದಿಂದಲೇ ದೇವಲೋಕದ ದಾರಿಯು ನಿರ್ಮಿಸಲ್ಪಟ್ಟಿದೆ. ಆ ದಾರಿಯಲ್ಲಿ ಸರ್ವಕಾಮನೆ

ಗಳನ್ನೂ ಜಯಿಸಿದ ಯತಿಗಳು ಪ್ರಯಾಣಮಾಡಿ ಸತ್ಯಸ್ವರೂಪಿಯಾದ ಆ ಪರಮಾತ್ಮನ ಸನ್ನಿಧಾನವನ್ನು ಸೇರುತ್ತಾರೆ.

**ಬೃಹಚ್ಚ ತದ್ದಿವ್ಯಮಚಿಂತ್ಯ ರೂಪಂ**
**ಸೂಕ್ಷ್ಮಾಚ್ಚ ತತ್ ಸೂಕ್ಷ್ಮತರಂ ವಿಭಾತಿ ।**
**ದೂರಾತ್ ಸುದೂರೇ ತದಿಹಾಂತಿಕೇ ಚ**
**ಪಶ್ಯತ್ ಸ್ವಿಹೈವ ನಿಹಿತಂ ಗುಹಾಯಾಂ ॥೭॥**

ಆ ಪರಮಾತ್ಮನ ಭವ್ಯತೆಯು ಯೋಚಿಸಲೂ ಅಸಾಧ್ಯವಾದಷ್ಟಿದೆ. ಅವನ ಸೂಕ್ಷ್ಮತೆಯಂತೂ ಅತೀ ಸೂಕ್ಷ್ಮವಾಗಿರುತ್ತದೆ. ದೂರವನು ನೋಡುವುದಾದರೆ ಅಂತ್ಯವೇ ಇಲ್ಲದಷ್ಟು ದೂರದಲ್ಲಿದ್ದಾನೆ. ಇಲ್ಲಿ ನಮ್ಮ ಬಳಿಯಲ್ಲೂ ಇದ್ದಾನೆ ಮತ್ತು ಅವರವರ ಹೃದಯಾಂತರಾಳದಲ್ಲೂ ಶೋಭಿಸುತ್ತಿದ್ದಾನೆ.

**ನ ಚಕ್ಷುಷಾ ಗೃಹ್ಯತೇ ನಾಪಿ ವಾಚ**
**ನಾನ್ಯೈರ್ದೇವೈಸ್ತಪಸಾ ಕರ್ಮಣಾ ವಾ ।**
**ಜ್ಞಾನಪ್ರಸಾದೇನ ವಿಶುದ್ಧ ಸತ್ವ**
**ಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ ॥೮॥**

ಅವನನ್ನು ಕಣ್ಣುಗಳಿಂದ ನೋಡಲಾಗುವುದಿಲ್ಲ. ಮಾತುಗಳಿಂದ ಗ್ರಹಿಸಲಾಗುವುದಿಲ್ಲ. ದೇವತೆಗಳಾಗಲೀ, ತಾಪಸಿಗಳಾಗಲೀ ಅವನನ್ನು ಸಮೀಪಿಸಲಾರರು. ಅವನು ಯಾವ ಕರ್ಮದಿಂದಲೂ ಬಂಧಿತನಲ್ಲ. ಆದರೆ ಆತ್ಮಶುದ್ಧಿಯಿಂದ ದಿವ್ಯಜ್ಞಾನವನ್ನು ಪಡೆದು, ತಪೋನಿಷ್ಠನಾಗಿ, ನಿಷ್ಕಲ್ಮಷ ಮನಸ್ಸಿನಿಂದ ಧ್ಯಾನಿಸಿದರೆ ಆ ಪರಮಾತ್ಮನ ಸಾಕ್ಷಾತ್ಕಾರವಾಗುತ್ತದೆ.

**ಏಷೋಽಣುರಾತ್ಮಾ ಚೇತಸಾ ವೇದಿತವ್ಯೋ**
**ಯಸ್ಮಿನ್ ಪ್ರಾಣಃ ಪಂಚಧಾ ಸಂವಿವೇಶ ।**
**ಪ್ರಾಣೈಶ್ಚಿತ್ತಂ ಸರ್ವಮೋತಂ ಪ್ರಜಾನಾಂ**
**ಯಸ್ಮಿನ್ ವಿಶುದ್ಧೇ ವಿಭವತ್ಯೇಷ ಆತ್ಮಾ ॥೯॥**

ಈ ಆತ್ಮವು ಕೇವಲ ಅಣುಮಾತ್ರವಿದ್ದು ; ವೇದಗಳಿಂದ ಚಲನೆ ಹೊಂದಿರುವ ಪ್ರಾಣಗಳು ಮಾತ್ರ ತಿಳಿದುಕೊಳ್ಳಲು ಸಾಧ್ಯ. ಆ ಪ್ರಾಣಗಳೂ ಐದು ವಿಧದ ಚೇತನಗಳಿಂದ ಕೂಡಿರಬೇಕು. ಯಾವನು ಪ್ರಸನ್ನನಾಗಲು ಈ ಜೀವಾತ್ಮನು ತನ್ನ ಸ್ವಾಭಾವಿಕ ರೂಪದಲ್ಲಿ ಪ್ರಕಾಶಿಸುವನೋ, ಅವನು ದುರ್ವಿಜ್ಞೇಯನು. ವಿಶುದ್ಧ ಮನಸ್ಸಿನಿಂದ ಮಾತ್ರ ಗ್ರಾಹ್ಯನಾಗಿರುವನು,

**ಯಂ ಯಂ ಲೋಕಂ ಮನಸಾ ಸಂವಿಭಾತಿ**
**ವಿಶುದ್ಧ ಸತ್ತ್ವಃ ಕಾಮಯತೇ ಯಾಂಶ್ಚ ಕಾಮಾನ್ ।**
**ತಂ ತಂ ಲೋಕಂ ಜಯತೇ ತಾಂಶ್ಚ ಕಾಮಾಂ**
**ಸ್ತಸ್ಮಾದಾತ್ಮಜ್ಞಂ ಹ್ಯರ್ಚಯೇದ್ ಭೂತಿ ಕಾಮಃ ॥೧೦॥**

ಯಾವ ಯಾವ ಲೋಕದಲ್ಲೇ ಆಗಲಿ ಯಾರ ಆತ್ಮವು ಪರಿಶುದ್ಧವಾಗಿದೆಯೋ ಅದು ಅವನ ಮನಸ್ಸಿನಮೇಲೆ ಬೆಳಕನ್ನು ಚೆಲ್ಲಿದಾಗ ತನ್ನ ಅಭಿಲಾಷೆಗಳನ್ನು ನೆರವೇರಿಸಿಕೊಳ್ಳುತ್ತಾನೆ. ಯಾವ ಲೋಕವನ್ನು ಅಪೇಕ್ಷಿಸುತ್ತಾನೋ ಅದನ್ನು ಗೆದ್ದುಕೊಳ್ಳುತ್ತಾನೆ. ಭೂತಿಕಾಮನಾದವನು ಆತ್ಮಜ್ಞನನ್ನು ಪೂಜಿಸಲೇಬೇಕು.

ದ್ವಿತೀಯ ಖಂಡಃ

**ಸ ವೇದೈತತ್ ಪರಮಂ ಬ್ರಹ್ಮಧಾಮ**
**ಯತ್ರ ವಿಶ್ವಂ ನಿಹಿತಂ ಭಾತಿ ಶುಭ್ರಂ ।**
**ಉಪಾಸತೇ ಪುರುಷಂ ಯೇ ಹ್ಯ ಕಾಮಾ**
**ಸ್ತೇ ಶುಕ್ರಮೇತದತಿವರ್ತಂತಿ ಧೀರಾಃ ॥೧॥**

ಪರಬ್ರಹ್ಮನು, ಎಲ್ಲಿ ಪರಿಶುಭ್ರವಾದ ಕಿರಣಗಳು ಗೋಚರವಾಗುವುವೋ ಅಂತಹ ಪ್ರಪಂಚದಲ್ಲಿ ತನ್ನ ಆವಾಸವನ್ನು ಕಲ್ಪಿಸಿಕೊಂಡಿರುವನೆಂದು ಆೀ

ಪುರುಷನು ತಿಳಿದಿರುವನು. ಯಾವ ಕಾಮಗಳೂ ಇಲ್ಲದ, ಪರಮಪುರುಷನನು ನಿಶ್ಚಲಭಕ್ತಿಯಿಂದ ಆರಾಧಿಸುವ ಧೀರರು ಈ ಶುಕ್ರವನ್ನು ಅತಿಕ್ರಮಿಸುವರು

**ಕಾಮಾನ್ ಯಃ ಕಾಮಯತೇ ಮನ್ಯಮಾನಃ**
**ಸ ಕಾಮಭಿರ್ಜಾಯತೇ ತತ್ರ ತತ್ರ ।**
**ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತು**
**ಇಹೈವ ಸರ್ವೇ ಪ್ರವಿಲೀಯಂತಿ ಕಾಮಾಃ ॥೨॥**

ಯಾರು ಕಾಮಗಳ ಮೇಲಿನ ಭ್ರಾಂತಿಯಿಂದ ಅವುಗಳನ್ನು ಪಡೆಯುವು ದರಲ್ಲಿ ತಲ್ಲೀನರಾಗಿರುವರೋ ಅವರು ಆ ಕಾಮಗಳಿಗಾಗಿಯೇ ಜನ್ಮವನ್ನು ಕಳೆಯುತ್ತ ಅವುಗಳು ತೋರಿಸಿದ ದಾರಿಯಲ್ಲೇ ನಡೆಯುತ್ತಾರೆ. ಆದರೆ ಕಾಮಗಳನ್ನು ಗೆದ್ದ ಮನುಷ್ಯನು ತನ್ನ ಆತ್ಮವನ್ನು ಕಂಡುಕೊಂಡು ಇಹ ಪ್ರಪಂಚದ ಸರ್ವ ಕಾಮಗಳಿಂದ ದೂರನಾಗುತ್ತಾನೆ.

**ನಾಯಮಾತ್ಮಾ ಪ್ರವಚನೇನ ಲಭ್ಯೋ ।**
**ನ ಮೇಧಯಾ ನ ಬಹುನಾ ಶ್ರುತೇನ**
**ಯಮೇವೈಷ ವೃಣುತೇ ತೇನಲಭ್ಯ**
**ಸ್ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ ॥೩॥**

ಈ ಆತ್ಮನನ್ನು ಬರಿಯ ಪ್ರವಚನಗಳಿಂದಾಗಲಿ, ಬುದ್ಧಿಶಕ್ತಿಯಿಂದಾ ಗಲಿ, ವೇದಗ್ರಂಥಗಳನ್ನು ಪಠಿಸುವುದರ ಮೂಲಕವಾಗಲೀ ಗೆಲ್ಲಲಾಗುವುದಿಲ್ಲ. ಯಾರನ್ನು ಅದೇ ಸ್ವಯಂ ಆರಿಸುತ್ತದೆಯೋ ಅವರಿಗೆ ಮಾತ್ರ ಆತ್ಮನು ತನ್ನ ತನುವನ್ನು ಪ್ರಕಾಶಪಡಿಸುವನು.

•

**ನಾಯಮಾತ್ಮಾ ಬಲಹೀನೇನ ಲಭ್ಯೋ**
**ನ ಚ ಪ್ರಮಾದಾತ್ತಪಸೋವಾಪ್ಯಲಿಂಗಾತ್ ।**
**ಏತೈರುಪಾಯ್ಯೈರ್ಯತತೇ ಯಸ್ತು ವಿದ್ವಾಂ**
**ಸ್ತಸ್ಯೈಷ ಆತ್ಮಾ ವಿಶತೇ ಬ್ರಹ್ಮ ಧಾಮ ॥೪॥**

ಈ ಆತ್ಮನು ಬಲಹೀನರಿಂದಾಗಲೀ, ತಪಸ್ಸಿನಲ್ಲಿ ಎಡವುವರಿಂದಾಗಲೀ, ವಿಷಯಗಳನ್ನು ವಕ್ರಮಾರ್ಗದಲ್ಲಿ ಪರಿಶೀಲಿಸುವವರಿಂದಾಗಲೀ ಗೆದ್ದುಕೊಳ್ಳಲಾಗುವುದಿಲ್ಲ. ಆದರೆ ಯಾರು ಆತ್ಮವಿದ್ಯೆಯಲ್ಲಿ ಪರಿಣತರಾಗಿದ್ದು ಮೇಲ್ಕಂಡ ಮಾರ್ಗಗಳಲ್ಲಿ ಸರಿಯಾಗಿ ನಡೆಯುವರೋ ಅವರ ಆತ್ಮವು ಪರಬ್ರಹ್ಮನನ್ನು ಪ್ರವೇಶಿಸುವುವು.

**ಸಂಪ್ರಾಪ್ಯೈನಮೃಷಯೋ ಜ್ಞಾನತೃಪ್ತಾಃ**
**ಕೃತಾತ್ಮಾನೋ ವೀತರಾಗಾಃ ಪ್ರಶಾಂತಾಃ ।**
**ತೇ ಸರ್ವಗ್ಂ ಸರ್ವತಃ ಪ್ರಾಪ್ಯ ಧೀರಾ**
**ಯುಕ್ತಾತ್ಮಾನಃ ಸರ್ವಮೇವಾ ವಿಶಂತಿ ॥೫॥**

ಋಷಿಗಳು ಆ ಪರಮಾತ್ಮನನ್ನು ಹೊಂದಿ ಜ್ಞಾನದಿಂದ ತೃಪ್ತರಾಗಿ, ಅವರ ಆತ್ಮಗಳನ್ನು ಪರಿಶುದ್ಧಗೊಳಿಸಿಕೊಂಡು ಎಲ್ಲ ವಿಧವಾದ ಆಕಾಂಕ್ಷೆಗಳನ್ನೂ ಮರೆತು ಪ್ರಶಾನ್ತಚಿತ್ತರಾಗಿ ಇರುತ್ತಾರೆ. ಈ ಜ್ಞಾನಿಗಳು ಆ ಪರಮಾತ್ಮನನ್ನು ಎಲ್ಲ ಕಡೆಗಳಿಂದಲೂ ಸಮೀಪಿಸಿ ಯುಕ್ತಾತ್ಮರಾಗಿ ಸರ್ವವನ್ನೂ ಪ್ರವೇಶಿಸುವರು.

**ವೇದಾಂತ ವಿಜ್ಞಾನ ಸುನಿಶ್ಚಿತಾರ್ಥಾಃ**
**ಸನ್ಯಾಸಯೋಗಾದ್ಯತಯಃ ಶುದ್ಧ ಸತ್ವಾಃ ।**
**ತೇ ಬ್ರಹ್ಮಲೋಕೇಷು ಪರಾಂತ ಕಾಲೇ**
**ಪರಾಮೃತಾಃ ಪರಿಮುಚ್ಯಂತಿ ಸರ್ವೇ ॥೬॥**

ಯಾವ ಯತಿಗಳು ಜಿತೇಂದ್ರಿಯರಾಗಿ. ಕಾಮ್ಯಕರ್ಮತ್ಯಾಗದಿಂದ ಶುದ್ಧಾಂತಃಕರಣರಾಗಿ, ವೇದಾಂತಜ್ಞಾನದಿಂದ ತತ್ವನಿಶ್ಚಯವನ್ನು ಹೊಂದಿರುವರೋ, ಅವರೆಲ್ಲರೂ ಅಂತ್ಯಕಾಲದಲ್ಲಿ ಪ್ರಸನ್ನನಾದ ಬ್ರಹ್ಮನೆಂಬ ಸಾಧನದಿಂದ, ಬ್ರಹ್ಮನಲ್ಲಿ ಮುಕ್ತರಾಗುವರು.

**ಗತಾಃ ಕಲಾಃ ಪಂಚದಶ ಪ್ರತಿಷ್ಠಾ**
**ದೇವಾಶ್ಚ ಸರ್ವೇ ಪ್ರತಿ ದೇವತಾಸು ।**
**ಕರ್ಮಾಣಿ ವಿಜ್ಞಾನಮಯಶ್ಚ ಆತ್ಮಾ**
**ಪರೇಽವ್ಯಯೇ ಸರ್ವ ಏಕೀ ಭವಂತಿ ॥೭॥**

ತಪಸ್ವಿಗಳಿಗೆ ಕಡೆಯಲ್ಲಿ ದೇಹದ ಹದಿನೈದು ಭಾಗಗಳೂ ತಮ್ಮ ತಮ್ಮ ಮೂಲಭೂತಗಳೊಡನೆ ಐಕ್ಯವಾಗುತ್ತವೆ. ದೇವಾಂಶಗಳೆಲ್ಲ ಅವರವ ಮೂಲದೇವತೆಗಳಲ್ಲಿ ಒಂದಾಗುತ್ತಾರೆ. ಕರ್ಮಗಳೂ, ಪರಮಾತ್ಮಜ್ಞಾನವೂ ಆತ್ಮನಲ್ಲಿ ಐಕ್ಯವಾಗಿ ಪರಾತ್ಪರನಲ್ಲಿ ಏಕೀಭಾವವನ್ನು ಹೊಂದುತ್ತವೆ.

**ಯಥಾ ನದ್ಯಃ ಸ್ಯಂದಮಾನಾಃ ಸಮುದ್ರೇಽ**
**ಸ್ತಂಗಚ್ಛಂತಿ ನಾಮರೂಪೇ ವಿಹಾಯ ।**
**ತಥಾ ವಿದ್ವಾನ್ನಾಮರೂಪಾದ್ವಿಮುಕ್ತಃ**
**ಪರಾತ್ ಪರಂ ಪುರುಷಮುಪೈತಿ ದಿವ್ಯಂ ॥೮॥**

ಯಾವ ರೀತಿ ಸಮಸ್ತ ನದಿಗಳೂ ತಮ್ಮ ತಮ್ಮ ಜಲಸಂಪತ್ತಿನೊಡನೆ ತಮ್ಮ ಹೆಸರು ಮತ್ತು ಮೂಲರೂಪಗಳನ್ನು ಅಳಿಸಿಕೊಂಡು ಮಹಾಸಮುದ್ರ ವನ್ನು ಸೇರುತ್ತವೆಯೋ ಹಾಗೆ ಜ್ಞಾನಿಗಳೂ ಕೂಡ ತಮ್ಮ ತಮ್ಮ ನಾಮ ರೂಪಗಳಿಂದ ಮುಕ್ತರಾಗಿ ಆ ಮಹಾಪುರುಷನ ದಿವ್ಯ ಸಮ್ಮುಖವನ್ನು ಸೇರುತ್ತಾರೆ.

**ಸಯೋಹವೈತತ್ಪರಮಂ ಬ್ರಹ್ಮ ವೇದ**
**ಬ್ರಹ್ಮೈವ ಭವತಿ ನಾಸ್ಯಾ ಬ್ರಹ್ಮವಿತ್ಕುಲೇ ಭವತಿ ।**
**ತರತಿ ಶೋಕಂ ತರತಿ ಪಾಪ್ಮಾನಂ ಗುಹಾ**
**ಗ್ರಂಥಿಭ್ಯೋ ವಿಮುಕ್ತೋಽಮೃತೋ ಭವತಿ ॥೯॥**

ಯಾರು ನಿಷ್ಠೆಯಿಂದ ಪರಬ್ರಹ್ಮ ತತ್ವವನ್ನು ಅರಿತುಕೊಳ್ಳುವರೋ ಅವರು ಬ್ರಹ್ಮತ್ವವನ್ನು ಪಡೆಯುತ್ತಾರೆ. ಅವರ ವಂಶದಲ್ಲೀ ಬ್ರಹ್ಮಜ್ಞಾನಿ ಗಳಲ್ಲದವರು ಜನಿಸುವುದಿಲ್ಲ. ಸಮಸ್ತ ವಿಧವಾದ ಶೋಕ ಮತ್ತು ಪಾಪ

ಳಿಂದ ವಿಮುಕ್ತರಾಗಿ ಬಂಧಿಸಲ್ಪಟ್ಟ ಹೃದಯ ತಂತುಗಳಿಂದಲೂ ವಿಮುಕ್ತರಾಗಿ ಅಮೃತರಾಗುವರು.

**ತದೇತದೃಚಾಭ್ಯುಕ್ತಂ—**

**ಕ್ರಿಯಾವಂತಃ ಶ್ರೋತ್ರಿಯಾ ಬ್ರಹ್ಮನಿಷ್ಠಾಃ**
**ಸ್ವಯಂ ಜುಹ್ವತೇ ಏಕರ್ಷಿಂ ಶ್ರದ್ಧಯಂತಃ ।**
**ತೇಷಾಮೇವೈತಾಂ ಬ್ರಹ್ಮವಿದ್ಯಾಂ ವದೇತ**
**ಶಿರೋವ್ರತಂ ವಿಧಿವದ್ಯೈಸ್ತು ಚೀರ್ಣಂ ॥೧೦॥**

ಋಗ್ವೇದದ ಪ್ರಕಾರ ಈ ವಿದ್ಯೆಯನ್ನು ಕ್ರಿಯಾಯುಕ್ತರೂ ಶ್ರೋತ್ರಿಯರೂ ಆದ ಬ್ರಹ್ಮನಿಷ್ಠರು ಏಕರ್ಷಿಯಾದ ಅಗ್ನಿಯಲ್ಲಿ ಶ್ರದ್ಧಾವಂತರಾಗಿ ತಾವೇ ಹೋಮಮಾಡುತ್ತಾರೆ. ಶಿರೋವ್ರತವನ್ನು ವಿಧಿವತ್ತಾಗಿ ಆಚರಿಸುವ ಅವರಿಗೆ ಮಾತ್ರ ಈ ವಿದ್ಯೆಯನ್ನು ಹೇಳಬೇಕು.

**ತದೇತತ್ ಸತ್ಯಮೃಷಿರಂಗಿರಾಃ ಪುರೋವಾಚ**
**ನೈತದಚೀರ್ಣವ್ರತೋಽಧೀತೇ ।**
**ನಮಃ ಪರಮ ಋಷಿಭ್ಯೋ**
**ನಮಃ ಪರಮ ಋಷಿಭ್ಯಃ ॥೧೧॥**

ಈ ಸತ್ಯವನ್ನು ಅಂಗಿರಸ ಎಂಬ ಋಷಿಯು ಪೂರ್ವದಲ್ಲಿ ಶೌನಕನಿಗೆ ಹೇಳಿದನು, ವ್ರತವನ್ನು ಆಚರಿಸದೆ ಇರುವವನು ಇದನ್ನು ಅಧ್ಯಯನ ಮಾಡಕೂಡದು. ಪರಮಋಷಿಗಳಿಗೆ ನಮಸ್ಕಾರ. ಪರಮಋಷಿಗಳಿಗೆ ನಮಸ್ಕಾರ.

ಮುಂಡಕೋಪನಿಷತ್ ಸಮಾಪ್ತಾ

# ಮಾಂಡೂಕ್ಯೋಪನಿಷತ್

॥ ಹರಿಃ ಓಂ ॥

**ಓಮಿತ್ಯೇತದಕ್ಷರಮಿದಂ ಸರ್ವಂ, ತಸ್ಯೋಪವ್ಯಾಖ್ಯಾನಂ, ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ ತ್ರಿಕಾಲಾತೀತಂ ತದಪ್ಯೋಂಕಾರ ಏವ ॥೧॥**

ಈ ಸರ್ವವೂ ಓಂ ಎಂಬ ಬೀಜಾಕ್ಷರವು. ಅದರ ಉಪಾಖ್ಯಾನವು ಹೀಗಿದೆ. ಈಗ ಇರುವುದು, ಮುಂದಿನದು ಇವೆಲ್ಲವೂ ಓಂಕಾರವೇ. ತ್ರಿಕಾಲಾತೀತವಾದುದು ಇನ್ನು ಯಾವುದಿದೆಯೋ ಅವೆಲ್ಲವೂ ಓಂಕಾರವೇ.

**ಸರ್ವಂ ಹ್ಯೇತತ್ ಬ್ರಹ್ಮಾಯಮಾತ್ಮಾ ಬ್ರಹ್ಮ ।**
**ಸೋಽಯಮಾತ್ಮಾ ಚತುಷ್ಪಾತ್ ॥೨॥**

ಈ ಸರ್ವವೂ ಬ್ರಹ್ಮವು. ಈ ಆತ್ಮನು ಬ್ರಹ್ಮ. ಆ ಈ ಆತ್ಮನು ನಾಲ್ಕುಪಾದಗಳುಳ್ಳವನು.

**ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಸ್ಥೂಲಭುಗ್ವೈಶ್ವಾನರಃ ಪ್ರಥಮಃ ಪಾದಃ ॥೩॥**

ಜಾಗ್ರದವಸ್ಥೆ ಎಂಬ ಸ್ಥಾನವುಳ್ಳ, ಹೊರಗಿನ ಪ್ರಜ್ಞೆಯುಳ್ಳ, ಏಳು ಅಂಗಗಳುಳ್ಳ, ಹತ್ತೊಂಭತ್ತು ಮುಖಗಳುಳ್ಳ, ಸ್ಥೂಲಭೋಗಿ"ಾದ ವೈಶ್ವಾನರನು ಮೊದಲನೆಯ ಪಾದವು.

**ಸ್ವಪ್ನಸ್ಥಾನೋಽಂತಃಪ್ರಜ್ಞಃ ಸಪ್ತಾಂಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥೪॥**

ಸ್ವಪ್ನಾವಸ್ಥೆ ಎಂಬ ಸ್ಥಾನವುಳ್ಳ, ಒಳಗಿನ ಪ್ರಜ್ಞೆಯುಳ್ಳ ಏಳು ಅಂಗ ಗಳುಳ್ಳ, ಹತ್ತೊಂಭತ್ತು ಮುಖಗಳುಳ್ಳ ಸೂಕ್ಷ್ಮ ಭೋಗಿಯಾದ ತೈಜಸನು ಎರಡನೆಯ ಪಾದವು.

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ**
**ನ ಕಂಚನ ಸ್ವಪ್ನಂ ಪಶ್ಯತಿ, ತತ್ ಸುಷುಪ್ತಂ ।**
**ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನ ಘನ ಏವಾನಂದ**
**ಮಯೋ ಹ್ಯಾನಂದಭುಕ್ ಚೇತೋಮುಖಃ**
**ಪ್ರಾಜ್ಞಸ್ತೃತೀಯಃ ಪಾದಃ ॥೫॥**

ಎಲ್ಲಿ ನಿದ್ರಿಸುವವನು ಯಾವ ಕಾಮವನ್ನೂ ಬಯಸುವುದಿಲ್ಲವೋ, ಯಾವ ಸ್ವಪ್ನವನ್ನೂ ನೋಡುವುದಿಲ್ಲವೋ. ಅದು ಸುಷುಪ್ತಿಯು. ಸುಷುಪ್ತಿ ಸ್ಥಾನದಲ್ಲಿರುವವನೂ ಏಕೀಭೂತನೂ, ಕೇವಲ ಪ್ರಜ್ಞಾನಘನನೂ, ಆನಂದ ಮಯನೂ, ಆನಂದಭೋಗಿಯೂ, ಚೇತೋಮುಖನೂ, ಆದ ಪ್ರಾಜ್ಞನು ಮೂರನೆಯ ಪಾದವು.

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽಂತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಂ ॥೬॥**

ಈತನೇ ಪರಮೇಶ್ವರ, ಈತನೇ ಸರ್ವಜ್ಞ, ಈತನೇ ಅಂತಃಶಕ್ತಿ, ಈತನೇ ಸಕಲ ಚರಾಚರಗಳ ಜನ್ಮಸ್ಥಾನ. ಈತನೇ ಸಕಲ ಪ್ರಾಣಿಗಳ ಹುಟ್ಟು ಮತ್ತು ಸಾವಿಗೆ ಕಾರಣನು.

**ನಾಂತಃಪ್ರಜ್ಞಂ ನ ಬಹಿಃಪ್ರಜ್ಞಂ ನೋಭಯತಃಪ್ರಜ್ಞಂ**
**ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಂ ।**
**ಅದೃಶ್ಯಮವ್ಯವಹಾರ್ಯಮಗ್ರಾಹ್ಯಮಲಕ್ಷಣ**
**ಮಚಿಂತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ ।**
**ಪ್ರಪಂಚೋಪಶಮಂ ಶಾಂತಂ ಶಿವಮದ್ವೈತಂ**
**ಚತುರ್ಥಂ ಮನ್ಯಂತೇ ಸ ಆತ್ಮಾ ಸವಿಜ್ಞೇಯಃ ॥೭॥**

ತುರೀಯನು ಅಂತಃಪ್ರಜ್ಞನಲ್ಲ, ಬಹಿಃಪ್ರಜ್ಞನಲ್ಲ, ಉಭಯಪ್ರಜ್ಞನಲ್ಲ ಪ್ರಜ್ಞಾನಘನನಲ್ಲ, ಪ್ರಜ್ಞನಲ್ಲ, ಅಪ್ರಜ್ಞನಲ್ಲ. ಅದೃಶ್ಯನೂ, ವ್ಯವಹಾರಕ್ಕೆ ನಿಲುಕದವನೂ, ಹಿಡಿಯುವುದಕ್ಕೆ ಆಗದವನೂ, ಲಕ್ಷಣರಹಿತನೂ, ಚಿಂತಿಸಲು ಆಗದವನೂ, ಶಬ್ದದಿಂದ ನಿರ್ದೇಶಿಸಲ್ಪಡದವನೂ, ಏಕಾತ್ಮಪ್ರತ್ಯಯ ಸಾರನೂ, ಪ್ರಪಂಚೋಪಶಮನೂ, ಶಾಂತನೂ, ಶಿವನೂ, ಅದ್ವೈತನೂ ಆದವನನ್ನು ಚತುರ್ಥನೆಂದು ತಿಳಿಯುತ್ತಾರೆ. ಅವನು ಆತ್ಮನು. ಅವನನ್ನು ಅರಿತುಕೊಳ್ಳಬೇಕು.

**ಸೋಽಯಮಾತ್ಮಾಽಧ್ಯಕ್ಷರಮೋಂಕಾರೋಽಧಿಮಾತ್ರಂ, ಪಾದಾ ಮಾತ್ರಾ, ಮಾತ್ರಾಶ್ಚ ಪಾದಾ, ಅಕಾರ ಉಕಾರ ಮಕಾರ ಇತಿ ||೮||**

ಸ್ವರ್ಗಲೋಕದಲ್ಲಿ ಬೆಳಗುವ ಈ ಆತ್ಮವೇ ಓಂಕಾರವು. ಅದರ ಅಕ್ಷರಗಳೇ ಆದರ ಪಾದಗಳು. ಅದರ ಪಾದಗಳು ಮಾತ್ರೆಗಳು. ಅವಾವುವೆಂದರೆ ಅಕಾರ, ಉಕಾರ ಮತ್ತು ಮಕಾರಗಳು.

**ಜಾಗರಿತಸ್ಥಾನೋ ವೈಶ್ವಾನರೋಽಕಾರಃ ಪ್ರಥಮಾ ಮಾತ್ರಾಽಽಪ್ತೇರಾದಿಮತ್ತ್ವಾದ್ವಾಪ್ನೋತಿ ಹ ವೈ ಸರ್ವಾನ್ ಕಾಮಾನಾದಿಶ್ಚ ಭವತಿ ಯ ಏವಂ ವೇದ ||೯||**

ಎಚ್ಚರವಾದ ಸ್ಥಾನದಲ್ಲಿರುವವನು ವೈಶ್ವಾನರನು. ಇವನೇ ಮೊದಲ ಮಾತ್ರೆಯಾದ ಅಕಾರವು. ಅವನು ಪ್ರಾರಂಭಿಕನೂ ಮತ್ತು ಎಲ್ಲಾಕಡೆಗೂ ವ್ಯಾಪಿಸಿಕೊಳ್ಳಬಲ್ಲವನು. ಯಾರು ಈತನ ವ್ಯಾಪ್ತತೆಯನ್ನು ಅರಿಯುತ್ತಾರೋ ಅವರು ಇಷ್ಟಾರ್ಥಸಿದ್ಧಿಯನ್ನು ಪಡೆಯುತ್ತಾರೆ ಮತ್ತು ಮೊದಲನೆಯವರು ಕೂಡ ಆಗುತ್ತಾರೆ, ಇದೇ ವೇದವು.

**ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರೋತ್ಕರ್ಷಾದುಭಯತ್ವಾದ್ವೋತ್ಕರ್ಷತಿ ಹ ವೈ ಜ್ಞಾನಸಂತತಿಂ ಸಮಾನಶ್ಚ ಭವತಿ ನಾಸ್ಯಾಬ್ರಹ್ಮವಿತ್ ಕುಲೇ ಭವತಿಯ ಏವಂ ವೇದ||೧೦||**

ಸ್ವಪ್ನಸ್ಥಾನದಲ್ಲಿದ್ದು ದಿವ್ಯಜ್ಞಾನವನ್ನು ಹೊಂದಿರುವ ತೈಜಸನೇ ಉಕಾರವು. ಇದೇ ಎರಡನೇ ಮಾತ್ರೆ. ಆದರ ಮುಂದುವರಿಕೆ ಮತ್ತು ಕೇಂದ್ರಸ್ಥಾನದಿಂದ ಆದಕ್ಕೆ ಪ್ರಾಮುಖ್ಯತೆ ಬಂದಿರುತ್ತೆ. ಯಾರು ಹೀಗೆ ತಿಳಿದುಕೊಳ್ಳುತ್ತಾರೋ ಅವರು ಜ್ಞಾನಸಂತತಿಯನ್ನು ಹೆಚ್ಚಿಸಿಕೊಳ್ಳುತ್ತಾರೆ ಸಮಾನರಾಗುತ್ತಾರೆ. ಇವರ ಕುಲದಲ್ಲಿ ಬ್ರಹ್ಮನನ್ನು ಅರಿಯದವರು ಹುಟ್ಟು ವುದಿಲ್ಲ. ಇದೇ ವೇದವು.

**ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ ಮಿತೇರಪೀತೇರ್ವಾ ಮಿನೋತಿ ಹ ವಾ ಇದಂ ಸರ್ವಮಪೀತಶ್ಚ ಭವತಿ ಯ ಏವಂ ವೇದ ||೧೧||**

ಸುಷುಪ್ತಿಸ್ಥಾನದಲ್ಲಿರುವ ಪ್ರಾಜ್ಞನೇ ಮೂರನೆಯ ಮಾತ್ರೆಯಾದ ಮಕಾರವು. ಈತನು ಅಳೆಯುವುದರಿಂದಾಗಲೀ ಒಂದಾಗುವುದರಿಂದಾಗಲೀ ಪ್ರಮುಖನಾಗಿದ್ದಾನೆ. ಯಾರು ಹೀಗೆ ತಿಳಿಯುತ್ತಾರೋ ಅವರು ಇವೆಲ್ಲ ವನ್ನೂ ಅಳೆಯುತ್ತಾರೆ ಮತ್ತು ಒಂದಾಗುತ್ತಾರೆ. ಇದೇ ವೇದವು.

**ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಂಚೋಪಶಮಃ ಶಿವೋಽದ್ವೈತ ಏವಮೋಂಕಾರ ಆತ್ಮೈವ ಸಂವಿಶಂತ್ಯಾತ್ಮನಾತ್ಮಾನಂ ಯ ಏಂ ವೇದ ||೧೨||**

ಮಾತ್ರೆಗಳಿಲ್ಲದ, ವ್ಯವಹಾರಗಳಿಲ್ಲದ, ಜೀವನ್ಮರಣಗಳಿಲ್ಲದ, ಶಿವಸ್ವರೂ ಪದ, ಅದ್ವೈತನಾದ ನಾಲ್ಕನೆಯ ಪಾದವೇ ಓಂಕಾರವು. ಇದನ್ನು ಅರಿತು ಕೊಳ್ಳುವವರು ತಮ್ಮ ಆತ್ಮವನ್ನು ಪರಮಾತ್ಮನಲ್ಲಿ ಐಕ್ಯಗೊಳಿಸಿ ಅಲ್ಲಿಯೇ ಉಳಿಯುತ್ತಾರೆ. ಅವನೇ ಆ ವೇದವು

ಮಾಂಡೂಕ್ಯೋಪನಿಷತ್ ಸಮಾಪ್ತಃ

# ಪ್ರಶ್ನೋಪನಿಷತ್

## ಪ್ರಥಮ ಪ್ರಶ್ನಃ

**ಓಂ ನಮಃ ಪರಮಾತ್ಮನೇ ಹರಿಃ ಓಂ ।**

**ಸುಕೇಶಾ ಚ ಭಾರದ್ವಾಜಃ, ಶೈಬ್ಯಶ್ಚ ಸತ್ಯಕಾಮಃ, ಸೌರ್ಯಾಯಣೀ ಚ ಗಾರ್ಗ್ಯಃ, ಕೌಸಲ್ಯಶ್ಚಾಶ್ವಲಾಯನೋ, ಭಾರ್ಗವೋ ವೈದರ್ಭಿಃ, ಕಬಂಧೀ ಕಾತ್ಯಾಯನಸ್ತೇ ಹ್ಯೇತೇ ಬ್ರಹ್ಮಪರಾಃ ಬ್ರಹ್ಮನಿಷ್ಠಾಃ ಪರಂ ಬ್ರಹ್ಮಾನ್ವೇಷಮಾಣಾ ಏಷ ಹ ವೈ ತತ್ಸರ್ವಂ ವಕ್ಷ್ಯತೀತಿ ತೇ ಹ ಸಮಿತ್ಪಾಣಯೋ ಭಗವಂತಂ ಪಿಪ್ಪಲಾದಮುಪಸನ್ನಾಃ ॥೧॥**

"ಓಂ" ಪರಮಾತ್ಮನೇ ನಿನಗೆ ನಮಸ್ಕರಿಸುತ್ತೇನೆ, ಹರಿಃ ಓಂ. ಭರದ್ವಾಜನ ಮಗನಾದ ಶುಕೇಶ, ಶಿಬಿಯ ಮಗನಾದ ಸತ್ಯಕಾಮ, ಗರ್ಗ್ಯ ಗೋತ್ರದ ಸೌರ್ಯಾಯಣಿ, ಅಶ್ವಲನ ಮಗನಾದ ಕೌಸಲ್ಯ, ವಿದರ್ಭದೇಶದ ಭಾರ್ಗವಿ ಮತ್ತು ಕತ್ಯನಮಗನಾದ ಕಬಂಧಿ ಮುಂತಾದವರು ಬ್ರಹ್ಮನಿಷ್ಠರೂ ಬ್ರಹ್ಮಪರರೂ ಆಗಿದ್ದರು. ಅವರು ಪರಬ್ರಹ್ಮನನ್ನು ಹುಡುಕುವವರಾಗಿ ಭಗವಂತನಾದ ಪಿಪ್ಪಲಾದನೇ ತಮಗೆ ಎಲ್ಲವನ್ನೂ ನಿಶ್ಚಯವಾಗಿ ತಿಳಿಸುವನೆಂದು ನಂಬಿ ಆತನ ಬಳಿಗೆ ಬಂದರು.

**ತಾನ್ ಹ ಸ ಋಷಿರುವಾಚ—ಭೂಯಯೇವ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂವತ್ಸರಂ ಸಂವತ್ಸ್ಯಥ; ಯಥಾಕಾಮಂ ಪ್ರಶ್ನಾನ್ ಪೃಚ್ಛತ; ಯದಿ ವಿಜ್ಞಾಸ್ಯಾಮಃ ಸರ್ವಂ ಹ ವೋ ವಕ್ಷ್ಯಾಮ ಇತಿ ॥೨॥**

ಆಗ ಪಿಪ್ಪಲಾದರು ಋಷಿಗಳಿಗೆ ಹೇಳುತ್ತಾರೆ—"ನೀವು ಇನ್ನೊಂದು ವರ್ಷ ತಪಸ್ಸನ್ನಾಚರಿಸುತ್ತ ಬ್ರಹ್ಮಚರ್ಯೆಯಿಂದ ಇದ್ದು ಶ್ರದ್ಧೆಯನ್ನು ಬಿಡದೆ ಒಂದುವರ್ಷ ಮುಗಿದಕೂಡಲೇ ಬಂದು ನಿಮ್ಮ ಪ್ರಶ್ನೆಗಳನ್ನು ಕೇಳಿರಿ. ಆಗ ನನಗೆ ಅದರಬಗ್ಗೆ ತಿಳಿದಿದ್ದರೆ ಎಲ್ಲವನ್ನೂ ನಿಮಗೆ ತಿಳಿಸುತ್ತೇನೆ" ಎಂದರು.

**ಅಥ ಕಬಂಧೀ ಕಾತ್ಯಾಯನ ಉಪೇತ್ಯ ಪಪ್ರಚ್ಛ—ಭಗವನ್ ಕುತೋ ಹ ವಾ ಇಮಾಃ ಪ್ರಜಾಃ ಪ್ರಜಾಯಂತ ಇತಿ ||೩||**

ಅನಂತರ ಅವರಲ್ಲಿ ಕಾತ್ಯಾಯನ ಗೋತ್ರದ ಕಬಂಧಿಯು ಮೊದಲು ಆಚಾರ್ಯ ಪಿಪ್ಪಲಾದರ ಬಳಿಗೆ ಬಂದು ಕೇಳಿದನು "ಮಹಾನುಭಾವಾ ಈ ಪ್ರಪಂಚದಲ್ಲಿ ಜನ್ಮ ತಳೆದಿರುವ ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ?"

**ತಸ್ಮೈ ಸ ಹೋವಾಚ—ಪ್ರಜಾಕಾಮೋ ವೈ ಪ್ರಜಾಪತಿಃ ಸ ತಪೋऽತಪ್ಯತ; ಸ ತಪಸ್ತಪ್ತ್ವಾ ಸ ಮಿಥುನಮುತ್ಪಾದಯತೇ, ರಯಿಂ ಚ ಪ್ರಾಣಂ ಚೇತ್ಯೇತೌ ಮೇ ಬಹುಧಾ ಪ್ರಜಾಃ ಕರಿಷ್ಯತ ಇತಿ ||೪||**

ಅವನಿಗೆ ಪಿಪ್ಪಲಾದರು ಹೇಳುತ್ತಾರೆ "ಒಂದು ಕಾಲದಲ್ಲಿ ಪ್ರಜಾಪತಿಗೆ ಮಕ್ಕಳನ್ನು ಪಡೆಯಬೇಕೆಂಬ ಅಪೇಕ್ಷೆ ಹುಟ್ಟಿತಪಸ್ಸು ಮಾಡಿದನು. ಆಗ ತನ್ನ ತೇಜಸ್ಸನ್ನು ಹೊರಗೆ ಬಿಟ್ಟನು. ಆ ತೇಜಸ್ಸಿನ ಘರ್ಷಣೆಯಿಂದ ಗಂಡು ಜನ್ಮದ ಪ್ರಾಣ ಮತ್ತು ಹೆಣ್ಣು ಜನ್ಮದ ರಯಿ ಎಂಬ ಅವಳಿ ಮಕ್ಕಳನ್ನು ಪಡೆದನು "ಇವರಿಬ್ಬರೂ ನನಗೆ ಅನೇಕ ಗುಣಸ್ವಭಾಗಳುಳ್ಳ ಮಕ್ಕಳನ್ನು ಸೃಷ್ಟಿಸುತ್ತಾರೆ" ಎಂದುಕೊಂಡನು.

**ಆದಿತ್ಯೋ ಹ ವೈ ಪ್ರಾಣೋ, ರಯಿರೇವ ಚಂದ್ರಮಾ, ರಯಿರ್ವಾ ।  ಏತತ್ ಸರ್ವಂ ಯನ್ಮೂರ್ತಂ ಚಾಮೂರ್ತಂ ಚ; ತಸ್ಮಾನ್ಮೂರ್ತಿರೇವ ರಯಿಃ ||೫||**

ಹೀಗೆ ಹುಟ್ಟಿದವರಲ್ಲಿ ಆದಿತ್ಯನೇ ಪ್ರಾಣನು, ಚಂದ್ರನೇ ರಯಿಯು ಇವರಿಬ್ಬರ ಸಂಯೋಗದಿಂದಲೇ ಈ ಪ್ರಪಂಚವೆಲ್ಲವೂ ಸೃಷ್ಟಿಸಲ್ಪಟ್ಟಿತು. ರಯಿಗೆ ಆಕಾರವಿರಲಿಲ್ಲವಾಗಿ, ಆಕಾರ ರಯಿ ಇವರಿಬ್ಬರೂ ಒಂದಾದರು.

**ಅಥಾದಿತ್ಯ ಉದಯನ್ ಯತ್ ಪ್ರಾಚೀಂ ದಿಶಂ ಪ್ರವಿಶತಿ, ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ । ಯದ್ದಕ್ಷಿಣಾಂ ಯತ್ ಪ್ರತೀಚೀಂ ಯದುದೀಚೀಂ ಯದಧೋ ಯದೂರ್ಧ್ವಂ ಯದಂತರಾದಿಶೋ, ಯತ್ಸರ್ವಂ ಪ್ರಕಾಶಯತಿ, ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ ॥೬॥**

ಯಾವಾಗ ಸೂರ್ಯನು ಉದಯಿಸುತ್ತಾನೋ ಆಗ ಅವನು ಪೂರ್ವ ದಿಕ್ಕನ್ನು ಪ್ರವೇಶಿಸುತ್ತಾನೆ ಮತ್ತು ತನ್ನ ವ್ಯಾಪ್ತಿಯಿಂದ ಪೂರ್ವದಿಕ್ಕಿನಲ್ಲಿರುವ ಪ್ರಾಣಿಗಳನ್ನು ತನ್ನ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ. ಅದರಂತೆ ಅವನು ದಕ್ಷಿಣ, ಪಶ್ಚಿಮ. ಉತ್ತರ, ಅಧೋಲೋಕ, ಊರ್ಧ್ವಲೋಕ ಮತ್ತು ಅಂತರ್‌ಲೋಕಗಳನ್ನು ಬೆಳಗಿಸುವಾಗ ಅಲ್ಲಿಯ ಸರ್ವ ಪ್ರಾಣಗಳನ್ನೂ ತನ್ನ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ.

**ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ । ತದೇತದೃಚಾಭ್ಯುಕ್ತಂ ॥೭॥**

ಸರ್ವಾತ್ಮನೂ ವಿಶ್ವರೂಪನೂ ಆದ ಆ ಪ್ರಾಣವೇ ಉದಯಿಸುತ್ತಾನೆ. ಅವನೇ ಅಗ್ನಿ. ಆ ಇದು ಋಕ್ಕಿನಿಂದ ಹೇಳಲ್ಪಟ್ಟಿದೆ.

**ವಿಶ್ವರೂಪಂ ಹರಿಣಂ ಜಾತವೇದಸಂ**
**ಪರಾಯಣಂ ಜ್ಯೋತಿರೇಕಂ ತಪಂತಂ ।**
**ಸಹಸ್ರ ರಶ್ಮಿಃ ಶತಧಾ ವರ್ತಮಾನಃ**
**ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥೮॥**

ವಿಶ್ವರೂಪನೂ ಜಾತವೇದನೂ, ಪರಾಯಣನೂ, ಜ್ಯೋತಿಯೂ, ಅದ್ವಿತೀಯನೂ, ತಪಿಸುತ್ತಿರುವವನೂ ಆದ ಹರಿಯನ್ನು ಅನುಸರಿಸುವವನೂ, ಪ್ರಜೆಗಳ ಪ್ರಾಣನೂ, ಸಹಸ್ರರಶ್ಮಿಗಳುಳ್ಳವನೂ ಆದ ಈ ಸೂರ್ಯನು ನೂರುಬಗೆಯಿಂದ ಉದಯಿಸುತ್ತಾನೆ.

**ಸಂವತ್ಸರೋವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂಚೋತ್ತರಂ ಚ । ತದ್ಯೇಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ । ತೇ ಚಾಂದ್ರಮಸಮೇವ ಲೋಕಮಭಿಜಯಂತೇ । ತ ಏವ ಪುನರಾವರ್ತಂತೇ ತಸ್ಮಾದೇತ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯಂತೇ । ಏಷ ಹವೈ ರಯಿರ್ಯಃ ಪಿತೃಯಾಣಃ ॥೯॥**

ಸಂವತ್ಸರವೆಂಬುದು ಪ್ರಜಾಪ್ರತಿಯೇ, ಸಂವತ್ಸರವು ಉತ್ತರಾಯಣ ಮತ್ತು ದಕ್ಷಿಣಾಯನವೆಂಬ ಎರಡು ದಾರಿಗಳಲ್ಲಿ ಸಾಗುತ್ತದೆ. ಯಾರು ಆ ಪರಾತ್ಪರನನ್ನು ಹೃದಯಪೂರ್ವಕವಾಗಿ ಅರ್ಚಿಸಿ ತಪಸ್ಸನ್ನಾಚರಿಸುವರೋ ಅವರು ಮೊದಲು ಚಂದ್ರಲೋಕವನ್ನೇ ಹೊಂದುತ್ತಾರೆ ಮತ್ತು ಅವರೇ ಪುನಹ ಜನಿಸುತ್ತಾರೆ, ಆದರೆ ಪ್ರಜಾಕಾಮುರಾದ ಋಷಿಗಳು ದಕ್ಷಿಣದ ದಾರಿಯನ್ನು ಹಿಡಿದು ತೆರಳುತ್ತಾರೆ. ಯಾವುದು ಪಿತೃಯಾಣವೋ ಅದೇ ರಯಿ.

**ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾತ್ಮಾನಮನ್ವಿಷ್ಯಾದಿತ್ಯಮಭಿಜಯಂತೇ । ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯಮೇತತ್ಪರಾಯಣ ಮೇತಸ್ಮಾನ್ನ ಪುನರಾವರ್ತಂತ ಇತ್ಯೇಷ ನಿರೋಧಸ್ತದೇಷ ಶ್ಲೋಕಃ ॥೧೦॥**

ಆದರೆ ಉತ್ತರದ ಪಥವು ತಪಸ್ವಿಗಳೂ, ಶ್ರದ್ಧೆಯಿಂದ ಬ್ರಹ್ಮಚರ್ಯೆಯನ್ನು ಆಚರಿಸುವವರೂ, ಆತ್ಮವಿದ್ಯೆಯನ್ನು ಚೆನ್ನಾಗಿ ಬಲ್ಲವರೂ ಮಾತ್ರ ಸಂಚರಿಸುವುದಾಗಿರುತ್ತೆ. ಅವರು ಸ್ವರ್ಗಲೋಕದ ಸೂರ್ಯನನ್ನು ಜಯಿಸುತ್ತಾರೆ, ಅಲ್ಲಿ ಪ್ರಾಣವು ಸ್ವಸ್ಥಾನದಲ್ಲಿದ್ದು ಜರಾಮರಣಾದಿಗಳಿರುವುದಿಲ್ಲ ಅಲ್ಲಿಗೆ ಹೋದ ಪ್ರಾಣವು ಹಿಂತಿರುಗುವುದಿಲ್ಲ. ಜನನ ಮರಣಗಳಿಗೆ ಅಲ್ಲಿ ತಡೆಯುಂಟುಮಾಡಲ್ಪಟ್ಟಿದೆ. ಈ ಮಂತ್ರ ಉಂಟು.

**ಪಂಚಪಾದಂ ಪಿತರಂ ದ್ವಾದಶಾಕೃತಿಂ**
**ದಿವ ಆಹುಃ ಪರೇ ಅರ್ಧೇ ಪುರೀಷಿಣಂ ।**
**ಅಥೇಮೇ ಅನ್ಯ ಉಪರೇ ವಿಚಕ್ಷಣಂ**
**ಸಪ್ತಚಕ್ರೇ ಷಡರ ಆಹುರರ್ಪಿತಮಿತಿ ॥೧೧॥**

ಕೆಲವರು ಆ ಪಿತೃವು ಐದು ಪಾದಗಳುಳ್ಳವನೆಂದೂ. ಹನ್ನೆರಡು ಆಕಾರಗಳನ್ನು ಹೊಂದಿದ್ದು ಆಕಾಶದಲ್ಲಿ ಹರಿದಾಡುವನೆಂದೂ, ಸ್ವರ್ಗಲೋಕಕನ್ನು ಆಚೆ ಇರುವನೆಂದೂ ಹೇಳುತ್ತಾರೆ. ಕೆಲವರು ಆ ಪರಮಾತ್ಮನು ಮಹಾವಿಚಕ್ಷಣಮತಿ ಎಂದೂ, ಆರಾರು ಆರೇಕಾಲುಗಳನ್ನು ಹೊಂದಿರುವ ಏಳುಚಕ್ರಗಳ ರಥದಲ್ಲಿ ಪ್ರಯಾಣಮಾಡುವವನೆಂದೂ ಹೇಳುತ್ತಾರೆ.

**ಮಾಸೋ ವೈ ಪ್ರಜಾಪತಿಸ್ತಸ್ಯ ಕೃಷ್ಣಪಕ್ಷ ಏವ ರಯಿಃ; ಶುಕ್ಲಃ ಪ್ರಾಣಸ್ತಸ್ಮಾದೇತ ಋಷಯಃ ಶುಕ್ಲ ಇಷ್ಟಂ ಕುರ್ವಂತೀತರ ಇತರಸ್ಮಿನ್ ॥೧೨॥**

ಮಾಸಗಳು ಪ್ರಜಾಪತಿಯು, ಅವುಗಳಲ್ಲಿ ಎರಡು ಪಕ್ಷಗಳಿದ್ದು ಕೃಷ್ಣ ಪಕ್ಷವು ಸ್ತ್ರೀಪ್ರತೀಕವಾದ ರಯಿ ಎಂದೂ ಶುಕ್ಲಪಕ್ಷವು ಪುರುಷಪ್ರತೀಕವಾದ ಪ್ರಾಣವೆಂದೂ ಕರೆಯಲ್ಪಟ್ಟಿದೆ. ಆದುದರಿಂದ ಋಷಿಗಳು ಶುಕ್ಲಪಕ್ಷದಲ್ಲಿ ಯಾಗಗಳನ್ನು ಮಾಡುತ್ತಾರೆ, ಇತರರು ಕೃಷ್ಣಪಕ್ಷದಲ್ಲಿ ಮಾಡುತ್ತಾರೆ.

**ಅಹೋರಾತ್ರೋ ವೈ ಪ್ರಜಾಪತಿಸ್ತಸ್ಯಾಹರೇವ ಪ್ರಾಣೋ ರಾತ್ರಿರೇವ ರಯಿಃ ಪ್ರಾಣಂ ವಾ ಏತೇತೀ ಪ್ರಸ್ಕಂದಂತಿ ಯೇ ದಿವಾ ರತ್ಯಾ ಸಂಯುಜ್ಯಂತೇ ಬ್ರಹ್ಮಚರ್ಯಮೇವ ತದ್ಯದ್ರಾತ್ರೌ ರತ್ಯಾ ಸಂಯುಜ್ಯಂತ ಇತಿ ॥೧೩॥**

ಇದೇ ರೀತಿ ದಿವಾರಾತ್ರಿಗಳೂ ಪ್ರಜಾಪತಿಯೇ. ಇದರಲ್ಲಿ ಹಗಲು ಪ್ರಾಣ, ರಾತ್ರಿಯು ರಯಿ. ಆದ್ದರಿಂದ ಯಾರು ಹಗಲುಹೊತ್ತಿನಲ್ಲಿ ಸಂಭೋಗಿಸುವರೋ ಅವರು ಆಯುಕ್ಷೀಣರಾಗಿ ದೇವತೆಗಳ ಕೋಪಕ್ಕೆ ಪಾತ್ರರಾಗು

ತ್ತಾರೆ. ಆದರೆ ಸಂಭೋಗವನ್ನು ರಾತ್ರಿಯ ಹೊತ್ತು ಆಚರಿಸುವವರು ಬ್ರಹ್ಮಚರ್ಯವನ್ನು ಪಾಲಿಸಿದವರೆನ್ನಿಸಿಕೊಳ್ಳುತ್ತಾರೆ,

**ಅನ್ನಂ ವೈ ಪ್ರಜಾಪತಿಸತ್ತೋ ಹ ವೈ ತದ್ರೇತಸ್ತಸ್ಮಾದಿಮಾ ಪ್ರಜಾಃ ಪ್ರಜಾಯಂತ ಇತಿ ||೧೪||**

ಅನ್ನವೂ ಕೂಡ ಪ್ರಜಾಪತಿಯೇ ಏಕೆಂದರೆ ಇದರಲ್ಲೇ ರೇತಸ್ಸು ಉತ್ಪನ್ನವಾಗುತ್ತದೆ ಮತ್ತು ಆ ರೇತಸ್ಸಿನಿಂದ ಪ್ರಜೆಗಳು ಹುಟ್ಟುತ್ತಾರೆ.

**ತದ್ಯೇಹ ವೈ ತತ್ ಪ್ರಜಾಪತಿವ್ರತಂ ಚರಂತಿ**
**ತೇ ಮಿಥುನಮುತ್ಪಾದಯಂತೇ ।**
**ತೇಷಾಮೇವೈಷ ಬ್ರಹ್ಮಲೋಕೋ ಯೇಷಾಂ**
**ತಪೋ ಬ್ರಹ್ಮಚರ್ಯಂ ಯೇಷು ಸತ್ಯಂ ಪ್ರತಿಷ್ಠಿತಂ ||೧೫||**

ಹೀಗಿರಲು ಯಾವ ಗೃಹಸ್ಥರು ಆ ಪ್ರಜಾಪತಿವ್ರತವನ್ನು ಅನುಷ್ಠಿಸುವರೋ ಅವರು ಮಿಥುನವನ್ನು ಉತ್ಪಾದಿಸುತ್ತಾರೆ. ಯಾರು ತಪಸ್ಸು ಮತ್ತು ಬ್ರಹ್ಮಚರ್ಯೆಗಳನ್ನು ಅನುಷ್ಠಿಸುವರೋ ಅವರು ಮತ್ತು ಯಾರಲ್ಲಿ ಸತ್ಯವು ಪ್ರತಿಷ್ಠಿತವಾಗಿರುವುದೋ ಅವರೂ ಬ್ರಹ್ಮಲೋಕವನ್ನು ಸೇರುತ್ತಾರೆ.

**ತೇಷಾಮಸೌ ವಿರಜೋ ಬ್ರಹ್ಮಲೋಕೋ ।**
**ನ ಯೇಷು ಜಿಹ್ಮಮನೃತಂ ನ ಮಾಯಾಚೇತಿ ||೧೬||**

ಯಾರಲ್ಲಿ ಕುಟಿಲತೆಯಾಗಲೀ, ಅನೃತವಾಗಲೀ ಮಾಯೆಯಾಗಲೀ ಇಲ್ಲವೋ ಅಂತಹವರಿಗೆ ಈ ರಜಸ್ಸಿಲ್ಲದ ಬ್ರಹ್ಮಲೋಕವು ಶಾಶ್ವತವಾಗಿರುತ್ತದೆ.

## ಅಥ ದ್ವಿತೀಯಪ್ರಶ್ನಃ

**ಅಥ ಹೈನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ । ಭಗವನ್, ಕತ್ಯೇವ ದೇವಾಃ ಪ್ರಜಾಂ ವಿಧಾರಯಂತೇ । ಕತರ ಏತತ್ ಪ್ರಕಾಶಯಂತೇ, ಕಃ ಪುನರೇಷಾಂ ವರಿಷ್ಠ ಇತಿ ॥೧॥**

ಅನಂತರ ಭಾರ್ಗವ ವೈದರ್ಭಿಯು ಪಿಪ್ಪಲಾದರನ್ನು ಪ್ರಶ್ನಿಸುತ್ತಾನೆ "ಹೇ ಭಗವನ್ ಎಷ್ಟು ದೇವತೆಗಳು ಈ ಸೃಷ್ಟಿಯಲ್ಲಿ ಪಾಲುಗೊಳ್ಳುತ್ತಾರೆ? ಎಷ್ಟು ದೇವತೆಗಳು ಪ್ರಕಾಶಿಸುತ್ತಾರೆ? ಇವರುಗಳಲ್ಲಿ ಅತ್ಯುಚ್ಚರಾದವರು ಯಾರು" ?

**ತಸ್ಮೈ ಸ ಹೋವಾಚ—ಆಕಾಶೋ ಹ ವಾ ಏಷ ದೇವೋ ವಾಯುರಗ್ನಿರಾಪಃ ಪೃಥಿವೀ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ । ತೇ ಪ್ರಕಾಶ್ಯಾಭಿವದಂತಿ 'ವಯಮೇತದ್ಬಾಣಮವಷ್ಟಭ್ಯ ವಿಧಾರ ಯಾಮಃ ॥೨॥**

ಆತನಿಗೆ ಮಹರ್ಷಿ ಪಿಪ್ಪಲಾದರು ಹೇಳುತ್ತಾರೆ "ಜೀವಿಗಳಿಗೆ ಸಂಬಂಧಿಸಿದ ದೇವರುಗಳೆಂದರೆ ಆಕಾಶ, ವಾಯು, ಅಗ್ನಿ, ಜಲ, ಭೂಮಿ, ವಾಕ್ಕು, ಮನಸ್ಸು, ನೋಟ ಮತ್ತು ಶಬ್ದ ಎಂಬ ತೇಜಸ್ಸುಗಳು. ಇವರು 'ನಾವೂ ಕೂಡ ಭಗವಂತನಂತೆ, ಸೃಷ್ಟಿಗೆ ಕಾರಣರಾಗಿ ಪೋಷಿಸಿಕೊಂಡು ಬರುತ್ತಿದ್ದೇವೆಂದು ಜಂಭ ಪಡುತ್ತಿದ್ದಾರೆ' "

**ತಾನ್ ವರಿಷ್ಠಃ ಪ್ರಾಣ ಉವಾಚ । ಮಾ ಮೋಹಮಾಪದ್ಯಥಾಹಮೇವೈತತ್ ಪಂಚಧಾತ್ಮಾನಂ ಪ್ರವಿಭಜ್ಯೈತದ್ಬಾಣಮವಷ್ಟಭ್ಯ ವಿಧಾರಯಾಮೀತಿ ತೇಽಶ್ರದ್ಧಧಾನಾ ಬಭೂವುಃ ॥೩॥**

ಆಗ ಮಹಿಮಾವಂತನಾದ ಪ್ರಾಣನು ಹೇಳುತ್ತಾನೆ "ಇಂತಹ ಮೋಹಕ್ಕೆ ಒಳಗಾಗಬೇಡಿ, ನಾನು ನನ್ನನ್ನು ಐದುಭಾಗಗಳಾಗಿ ಮಾಡಿ

ಕೊಂಡು ಈ ಶರೀರವನ್ನು ಎತ್ತಿ ಹಿಡಿದು ಧರಿಸಿರುತ್ತೇನೆ. ನಾನೇ ಅದನ್ನು ಕಾಪಾಡುವವನು " ಎಂದನು. ಆದರೆ ಇತರರು ಆತನನ್ನು ನಂಬಲಿಲ್ಲ.

**ಸೋಽಭಿಮಾನಾದೂರ್ಧ್ವಮುತ್ಕ್ರಮತ ಇವ ತಸ್ಮಿನ್ನುತ್ಕ್ರಾಮತ್ಯಥೇತರೇ ಸರ್ವ ಏವೋತ್ಕ್ರಾಮಂತೇ, ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವ ಏವ ಪ್ರಾತಿಷ್ಠಂತೇ । ತದ್ಯಥಾ ಮಕ್ಷಿಕಾ ಮಧುಕರರಾಜಾನಮುತ್ಕ್ರಾಮಂತಂ ಸರ್ವಾ ಏವೋತ್ಕ್ರಾಮಂತೇ, ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರಾತಿಷ್ಠಂತ ಏವಂ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ; ತೇ ಪ್ರೀತಾಃ ಪ್ರಾಣಂ ಸ್ತುನ್ವಂತಿ ॥೪॥**

ಆಗ ಪ್ರಾಣನು ಕೋಪಗೊಂಡು ಮೇಲಕ್ಕೆದ್ದು ದೇಹದಿಂದ ಹೊರಕ್ಕೆ ಬರಲು ತೊಡಗಿದನು. ಅವನು ಮೇಲಕ್ಕೆದ್ದಕೂಡಲೇ ಇತರರೆಲ್ಲರೂ ಎದ್ದರು ಮತ್ತು ಅವನು ನಿಲ್ಲಲು ಇತರರೂ ನಿಂತರು. ಯಾವ ರೀತಿ ರಾಣಿ ಜೇನುಹುಳು ಮೇಲಕ್ಕೆದ್ದಕೂಡಲೇ ಇತರ ಜೇನು ಹುಳುಗಳೂ ಮೇಲೆದ್ದು ಅದು ಇದ್ದಕಡೆ ಅವೂ ಇರಬೇಕೋ ಹಾಗೆಯೇ ವಾಕ್ಕು ಮತ್ತು ಮನಸ್ಸು ನೋಟ ಮತ್ತು ಶಬ್ದವೂ ಪ್ರಾಣನನ್ನು ಅನುಸರಿಸಲೇಬೇಕಾಗಿದ್ದುದರಿಂದ ಅವುಗಳು ಪ್ರಾಣನ ಶ್ರೇಷ್ಠತೆಯನ್ನು ಒಪ್ಪಿಕೊಂಡು ಅದನ್ನು ಹೊಗಳಿ ದೇಹದಲ್ಲೇ ಉಳಿಯಲು ಕೇಳಿಕೊಂಡವು.

**ಏಷೋಽಗ್ನಿಸ್ತಪತ್ಯೇಷ ಸೂರ್ಯ । ಏಷ ಪರ್ಜನ್ಯೋ ಮಘವಾನೇಷ ವಾಯುಃ । ಏಷ ಪೃಥಿವೀ ರಯಿರ್ದೇವಃ । ಸದಸಚ್ಚಾ-ಮೃತಂ ಚ ಯತ್ ॥೫॥**

ಇದೇ ಪ್ರಾಣನೇ ಅಗ್ನಿಯನ್ನೂ ಸೂರ್ಯನನ್ನೂ ತೇಜಸ್ವಿಗಳನ್ನಾಗಿ ಮಾಡುತ್ತಾನೆ. ಮಳೆಗೂ ಮತ್ತು ಇಂದ್ರನಿಗೂ, ಭೂಮಿ ಮತ್ತು ವಾಯುವಿಗೂ, ರಯಿ ಮತ್ತು ದೇವತೆಗಳಿಗೂ, ಆಕಾರ ಮತ್ತು ನಿರಾಕಾರಕ್ಕೂ ಸಂಬಂಧಿಸಿದುದಾಗಿ ಅಮೃತವಾಗಿರುತ್ತದೆ.

**ಅರಾ ಇವ ರಥನಾಭೌ ಪ್ರಾಣೇ ಸರ್ವಂ ಪ್ರತಿಷ್ಠಿತಂ ।**
**ಋಚೋ ಯಜೂಂಷಿ ಸಾಮಾನಿ ಯಜ್ಞಃ ಕ್ಷತ್ರಂ ಬ್ರಹ್ಮ ಚ ॥೬॥**

ಯಾವ ರೀತಿ ರಥಚಕ್ರದ ಅರೇಕಾಲುಗಳು ಗುಂಬದಲ್ಲಿ ಸೇರಿಕೊಂಡಿರುವುವೋ ಹಾಗೆ ಎಲ್ಲ ಚೇತನಗಳೂ ಪ್ರಾಣನಲ್ಲಿ ಪ್ರತಿಷ್ಠಿಸಲ್ಪಟ್ಟಿವೆ. ಹೀಗೆಯೇ ಋಗ್ವೇದ, ಯಜುರ್ವೇದ, ಸಾಮವೇದಗಳೂ, ಇವುಗಳಿಂದಾಗುವ ಯಜ್ಞ ಎಲ್ಲರನ್ನೂ ಕಾಪಾಡುವ ಕ್ಷತ್ರಿಯ, ಯಜ್ಞ ಯಾಗಾದಿಗಳಿಗೆ ಕಾರಣನಾದ ಬ್ರಾಹ್ಮಣ ಎಲ್ಲವೂ ಪ್ರಾಣನಲ್ಲಿ ಪ್ರತಿಷ್ಠಿತವಾಗಿವೆ.

**ಪ್ರಜಾಪತಿಶ್ಚರಸಿ ಗರ್ಭೇ ತ್ವಮೇವ ಪ್ರತಿಜಾಯಸೇ । ತುಭ್ಯಂ ಪ್ರಾಣಪ್ರಜಾಸ್ತ್ವಿಮಾ ಬಲಿಂ ಹರಂತಿ ಯಃ ಪ್ರಾಣೈಃ ಪ್ರತಿತಿಷ್ಠಸಿ ॥೭॥**

ಹೇ ಪ್ರಾಣವೇ ನೀನೇ ಪ್ರಜಾಪತಿಯಾಗಿ ಗರ್ಭಕೋಶದಲ್ಲಿ ಸಂಚರಿಸಿ ತಂದೆ ತಾಯಿಗಳ ರೂಪದಲ್ಲಿ ಜನಿಸುತ್ತೀಯೆ. ಆದ್ದರಿಂದ ಓ ಪ್ರಾಣವೇ ನಿನಗೆ ಭೂಲೋಕದ ಜೀವಿಗಳು ಕಾಣಿಕೆಗಳನ್ನು ತಂದು ಅರ್ಪಿಸುತ್ತಾರೆ.

**ದೇವಾನಾಮಸಿ ವಹ್ನಿತಮಃ ಪಿತೄಣಾಂ ಪ್ರಥಮಾ ಸ್ವಧಾ ।**
**ಋಷೀಣಾಂ ಚರಿತಂ ಸತ್ಯಮಥರ್ವಾಂಗಿರಸಾಮಸಿ ॥ ೮ ॥**

ಹೇ ಪ್ರಾಣವೇ ಇಂದ್ರನೇ ಮೊದಲಾದ ದೇವತೆಗಳಿಗೆ ಹವಿಸ್ಸುಗಳನ್ನು ಕೊಂಡೊಯ್ಯುವ ಶ್ರೇಷ್ಠ ವಾಹಕನಾಗಿದ್ದೀಯೆ. ಪಿತೃಗಳಿಗೆ ಪ್ರಥಮ ಪ್ರಾಪಕನಾಗಿದ್ದೀಯೆ. ಆಂಗಿರಸರಾದ ಅಥರ್ವ ಋಷಿಗಳಿಗ ಸತ್ಯವಾದ ಚರಿತನಾಗಿರುವೆ.

**ಇಂದ್ರಸ್ತ್ವಂ ಪ್ರಾಣತೇಜಸಾ ರುದ್ರೋಽಸಿ ಪರಿರಕ್ಷಿತಾ ।**
**ತ್ವಮಂತರಿಕ್ಷೇ ಚರಸಿ ಸೂರ್ಯಸ್ತ್ವಂ ಜ್ಯೋತಿಷಾಂಪತಿಃ ॥೯॥**

ಹೇ ಪ್ರಾಣವೇ, ನೀನು ಇಂದ್ರನಾಗಿರುವೆ. ತೇಜಸ್ಸಿನಿಂದ ನೀನು ರುದ್ರನೂ ಆಗಿರುವೆ, ಸ್ಥಿತಿಕಾಲದಲ್ಲಿ ರಕ್ಷಕನಾಗಿರುವೆ, ಜ್ಯೋತಿಗಳಿಗೆ ಒಡೆಯನಾದ ಸೂರ್ಯನಾಗಿ ನೀನೇ ಅಂತರಿಕ್ಷದಲ್ಲಿ ಸಂಚರಿಸುತ್ತಿರುವೆ.

**ಯದಾ ತ್ವಮಭಿವರ್ಷಸ್ಯಥೇಮಾಃ ಪ್ರಾಣತೇ ಪ್ರಜಾಃ ।**
**ಆನಂದರೂಪಾಸ್ತಿಷ್ಠಂತಿ ಕಾಮಾಯಾನ್ನಂ ಭವಿಷ್ಯತೀತಿ ॥೧೦॥**

ಯಾವಾಗ ನೀನು ಪರ್ಜನ್ಯನಾಗಿ ಮಳೆ ಸುರಿಸುತ್ತೀಯೋ ಆಗ ಪ್ರಜೆಗಳೆಲ್ಲರೂ ಬದುಕಿಕೊಳ್ಳುತ್ತಾರೆ. ಯಥೇಷ್ಟವಾಗಿ ಅನ್ನವುಂಟಾಗುವುದು ಎಂದು ಆನಂದರೂಪರಾಗಿ ಇರುತ್ತಾರೆ.

**ವ್ರಾತ್ಯಸ್ತ್ವಂ ಪ್ರಾಣೈಕಋಷಿರತ್ತಾ ವಿಶ್ವಸ್ಯ ಸತ್ಪತಿಃ ।**
**ವಯಮಾದ್ಯಸ್ಯ ದಾತಾರಃ ಪಿತಾ ತ್ವಂ ಮಾತರಿಶ್ವನಃ ॥೧೧॥**

ಹೇ ಪ್ರಾಣ, ನೀನು ಸಂಸ್ಕಾರವಿಲ್ಲದವನಾಗಿಯೂ ಏಕರ್ಷಿ ಎಂಬ ಹೆಸರಿನ ಅಗ್ನಿಯಾಗಿ ಎಲ್ಲ ಹವಿಸ್ಸುಗಳನ್ನು ಭುಜಿಸುವವನಾಗಿದ್ದೀಯೆ. ನೀನು ವಿಶ್ವಕ್ಕೆ ಸತ್ಪತಿಯು. ನಾವು ಹವಿಸ್ಸನ್ನು ಕೊಡುವವರು. ಹೇ ಮಾತರಿಶ್ವ ನೀನು ನಮ್ಮ ತಂದೆಯಾಗಿದ್ದೀಯೆ.

**ಯಾತೇ ತನೂರ್ವಾಚಿ ಪ್ರತಿಷ್ಠಿತಾ**
**ಯಾ ಶ್ರೋತ್ರೇ ಯಾ ಚ ಚಕ್ಷುಷಿ ।**
**ಯಾ ಚ ಮನಸಿ ಸಂತತಾ**
**ಶಿವಾಂ ತಾಂ ಕುರು ಮೋತ್ಕ್ರಮೀಃ ॥೧೨॥**

ನಿನ್ನ ಯಾವ ಶಕ್ತಿಯು ವಾಕ್ಕು ಶ್ರೋತ್ರ ಚಕ್ಷು ಇವುಗಳಲ್ಲಿರುವುದೋ ಅದನ್ನು ಶಾಂತವಾಗಿ ಮಾಡು. ಈ ಶರೀರದಿಂದ ಹೊರಗೆ ಹೋಗಬೇಡ.

ಪ್ರಾಣಸ್ಯೇದಂ ವಶೇ ಸರ್ವಂ
ತ್ರಿದಿವೇ ಯತ್ ಪ್ರತಿಷ್ಠಿತಂ ।
ಮಾತೇವ ಪುತ್ರಾನ್ ರಕ್ಷಸ್ವ
ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥೧೩॥

ಹೇ ಪ್ರಾಣವೇ ಈ ಪ್ರಪಂಚದಲ್ಲೂ ಸ್ವರ್ಗಲೋಕದಲ್ಲೂ ಇರುವ ಎಲ್ಲಾ ಸೃಷ್ಟಿಯೂ ನಿನ್ನ ಅಧೀನದಲ್ಲಿರುತ್ತವೆ. ತಾಯಿಯು ತನ್ನ ಮಕ್ಕಳನ್ನು ಸಾಕುವ ರೀತಿಯಲ್ಲಿ ನಮ್ಮನ್ನು ಎಚ್ಚರದಿಂದ ನೋಡಿಕೋ. ನಮಗೆ ಶ್ರೀ, ಪ್ರಜ್ಞೆ, ಮತ್ತು ಸುರೂಪವನ್ನು ಕೊಡು.

## ತೃತೀಯ ಪ್ರಶ್ನಃ

**ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ । ಭಗವನ್ ಕುತ ಏಷ ಪ್ರಾಣೋ ಜಾಯತೇ, ಕಥಮಾಯಾತ್ಯಸ್ಮಿಂ ಶರೀರೇ ? ಆತ್ಮಾನಂವಾ ಪ್ರವಿಭಜ್ಯ ಕಥಂಪ್ರಾತಿಷ್ಠತೇ ? ಕೇನೋತ್ಕ್ರಮತೇ ? ಕಥಂ ಬಾಹ್ಯಮಭಿಧತ್ತೇ ? ಕಥಮಧ್ಯಾತ್ಮಮಿತಿ ॥೧॥**

ತರುವಾಯ ಕೌಸಲ್ಯ ಆಶ್ವಲಾಯನನೂ ಕೇಳುತ್ತಾನೆ. "ಸ್ವಾಮಿ ಈ ಪ್ರಾಣವು ಎಲ್ಲಿ ಜನಿಸುತ್ತದೆ ? ಈ ದೇಹದೊಳಕ್ಕೆ ಹೇಗೆ ಬರುತ್ತದೆ ? ಅಥವಾ ಅದು ಹೇಗೆ ಸ್ವವಿಭಾಜ್ಯವಾಗಿ ನಿಲ್ಲುತ್ತದೆ ? ಯಾವ ರೀತಿ ಬಾಹ್ಯ ಜಗತ್ತನ್ನೂ ಮತ್ತು ದೇಹದೊಳಗಿರುವ ಪ್ರಾಣಗಳನ್ನೂ ಸಲಹಿಕೊಂಡು ಬರುತ್ತದೆ ?

**ತಸ್ಮೈ ಸ ಹೋವಾಚಾತಿಪ್ರಶ್ನಾನ್ ಪೃಚ್ಛಸಿ ।**
**ಬ್ರಹ್ಮಿಷ್ಠೋಽಸೀತಿ, ತಸ್ಮಾತ್ತೇಽಹಂ ಬ್ರವೀಮಿ ॥೨॥**

ಅವನಿಗೆ ಪಿಪ್ಪಲಾದರು ಹೇಳುತ್ತಾರೆ, "ನೀವು ಮಹಾ ಜಟಿಲವಾದ ಪ್ರಶ್ನೆಗಳನ್ನು ಕೇಳುತ್ತಿದ್ದೀರಿ. ಆದರೂ ಪರಮಪವಿತ್ರರಾಗಿರುವುದರಿಂದ ಎಲ್ಲವನ್ನೂ ನಿಮಗೆ ಹೇಳುತ್ತಿದ್ದೇನೆ.

**ಆತ್ಮನ ಏಷ ಪ್ರಾಣೋ ಜಾಯತೇ । ಯಥೈಷಾ ಪುರುಷೇ ಛಾಯೈ ತಸ್ಮಿನ್ನೇತದಾತತಂ ಮನೋಕೃತೇನಾಯಾತ್ಯಸ್ಮಿಂ ಶರೀರೇ ॥೩॥**

ಈ ಪ್ರಾಣನು ಆತ್ಮನಿಂದ ಹುಟ್ಟುತ್ತಾನೆ. ನೆರಳು ಪುರುಷನ ಶರೀರವನ್ನು ಅವಲಂಬಿಸಿ ಹೇಗೆ ಇರುತ್ತದೆಯೋ ಈ ಪ್ರಾಣನು ಸತ್ಯಪುರುಷನಲ್ಲಿ ಸಮರ್ಪಿತನಾಗಿರುವನು ಮತ್ತು ಮನಸ್ಸಿನ ಸಂಕಲ್ಪಾದಿ ಕರ್ಮದಿಂದ ಈ ಶರೀರಕ್ಕೆ ಬರುತ್ತಾನೆ.

**ಯಥಾ ಸಮ್ರಾಡೇವಾಧಿಕೃತಾನ್ ವಿನಿಯುಂಕ್ತೇ । ಏತಾನ್ ಗ್ರಾಮಾನೇತಾನ್ ಗ್ರಾಮಾನಧಿತಿಷ್ಠಸ್ವೇತ್ಯೇವಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ ಪೃಥಗೇವ ಸಂನಿಧತ್ತೇ ॥೪॥**

ಯಾವ ರೀತಿ ಚಕ್ರವರ್ತಿಯು ತನ್ನ ಅಧಿಕಾರಿಗಳಿಗೆ "ಈ ಗ್ರಾಮಗಳ ಆಡಳಿತವನ್ನು ನನಗಾಗಿ ಮಾಡಿ" ಎಂದೂ, ಕೆಲವರಿಗೆ "ಈ ಇತರ ಆಜ್ಞೆಗಳನ್ನು ನನಗಾಗಿ ಜಾರಿಗೆ ತನ್ನಿ" ಎಂದೂ ಹೇಳುವನೋ ಹಾಗೆ ಮುಖ್ಯಪ್ರಾಣನು ಇತರ ಪ್ರಾಣಗಳನ್ನು ಅವನ ಇತರ ಸ್ಥಾನಗಳಲ್ಲಿ ನೇಮಿಸುತ್ತಾನೆ.

**ಪಾಯೂಪಸ್ಥೇಽಪಾನಂ; ಚಕ್ಷುಃ ಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರಾತಿಷ್ಠತೇ ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವಂತಿ ॥೫॥**

ಅಪಾನವಾಯುವು ಗುದಸ್ಥಾನಗಳಲ್ಲಿಯೂ, ಅಂಗಗಳಲ್ಲೂ ಸೇರಿರುತ್ತವೆ, ಪ್ರಾಣವಾಯುವು ಕಣ್ಣು, ಕಿವಿ, ಬಾಯಿ ಮತ್ತು ಮೂಗುಗಳಲ್ಲಿ ಸೇರಿರುತ್ತವೆ. ಸಮಾನವಾಯುವು ದೇಹದ ಮಧ್ಯದಲ್ಲಿ ಸ್ವಯಂ ಪ್ರತಿಷ್ಠಿತವಾಗಿರುತ್ತೆ. ಈತನೇ ಸೇವಿಸಿದ ಪಕ್ವಾನ್ನಗಳನ್ನು ಸಮಾನವಾಗಿ ಹಂಚುವವನು. ಇದಲ್ಲದೆ ಈತನಿಂದಲೇ ಏಳು ಅಗ್ನಿಶಿಖೆಗಳು ಹೊರಗೆ ಬರುತ್ತಿರುವುವು.

**ಹೃದಿ ಹ್ಯೇಷ ಆತ್ಮಾ । ಅತ್ರೈತದೇಕಶತಂ ನಾಡೀನಾಂ ತಾಸಾಂ ಶತಂ ಶತಮೇಕೈಕಸ್ಯಾಂ ದ್ವಾಸಪ್ತತಿರ್ದ್ವಾಸಪ್ತತಿಃ ಪ್ರತಿಶಾಖಾ ನಾಡೀ ಸಹಸ್ರಾಣಿ ಭವಂತ್ಯಾಸು ವ್ಯಾನಶ್ಚರತಿ ॥೬॥**

ಆತ್ಮನು ಹೃದಯದಲ್ಲೇ ವಾಸಿಸುತ್ತಾನೆ. ಹೃದಯದಲ್ಲಿ ಒಂದು ನೂರ ಒಂದು ನಾಡಿಗಳಿರುತ್ತವೆ. ಈ ಪ್ರತಿಯೊಂದು ನಾಡಿಯೂ ಒಂದು ನೂರು ಉಪನಾಡಿಗಳನ್ನು ಹೊಂದಿರುತ್ತವೆ. ಪ್ರತಿಯೊಂದು ಉಪನಾಡಿಯು ಎಪ್ಪತ್ತೆರಡುಸಾವಿರ ಚಿಕ್ಕನಾಡಿಗಳನ್ನು ಹೊಂದಿರುತ್ತವೆ. ಈ ನಾಡಿಗಳ ಲ್ಲೆಲ್ಲಾ ವ್ಯಾನವು ಸಂಚರಿಸುತ್ತದೆ.

**ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯಲೋಕಂ ॥೭॥**

ಈ ಅನೇಕ ನರ ನಾಡಿಗಳ ಪೈಕಿ ಒಂದು ನಾಡಿಯ ಮೂಲಕ ಉದಾನ ವಾಯುವು ಸಂಚರಿಸಿ ಊರ್ಧ್ವಗಾಮಿಯಾಗಿ ಪುಣ್ಯದಿಂದ ಪುಣ್ಯಲೋಕಕ್ಕೂ, ಪಾಪದಿಂದ ನರಕಕ್ಕೂ ಪುಣ್ಯಪಾಪಗಳೆರಡರಿಂದ ಮನುಷ್ಯಲೋಕಕ್ಕೂ ಕೊಂಡೊಯ್ಯುತ್ತದೆ.

**ಆದಿತ್ಯೋ ಹ ವೈ ಬಾಹ್ಯಃ ಪ್ರಾಣಃ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ । ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನಮವಷ್ಟಭ್ಯಾಂತರಾ ಯದಾಕಾಶಃ ಸ ಸಮಾನೋ ವಾಯುರ್ವ್ಯಾನಃ ॥೮॥**

ಸೂರ್ಯನು ದೇಹದ ಹೊರಭಾಗದ ಪ್ರಾಣವಾಯುವು ಏಕೆಂದರೆ ಇವನು ಕಣ್ಣಿನಲ್ಲಿರುವ ಈ ಪ್ರಾಣವನ್ನು ಅನುಗ್ರಹಿಸುತ್ತಾ ಉದಯಿಸು ತ್ತಾನೆ. ಪೃಥಿವಿಯಲ್ಲಿರುವ ದೇವತೆಯೇ ಪುರುಷನ ಅಪಾನವಾಯುವನ್ನು ವಶಪಡಿಸಿಕೊಂಡು ಇರುತ್ತದೆ. ಪ್ರಾಣವಾಯುವಿಗೂ, ಅಪಾನವಾಯು

ವಿಗೂ ಮಧ್ಯಂತರದ ಆಕಾಶದಲ್ಲಿ ಸಂಚರಿಸುವ ವಾಯುವೇ ಸಮಾನ ವಾಯುವು.

**ತೇಜೋ ಹ ವಾ ಉದಾನಸ್ತಸ್ಮಾದುಪಶಾಂತತೇಜಾಃ ।**
**ಪುನರ್ಭವಮಿಂದ್ರಿಯೈರ್ಮನಸಿ ಸಂಪದ್ಯಮಾನೈಃ ॥೯॥**

ತೇಜಸ್ಸೇ ಉದಾನವಾಯುವು. ವಾಯುವೇ ವ್ಯಾನವು. ಆದ್ದರಿಂದ ಯಾವಾಗ ದೇಹದಲ್ಲಿ ತೇಜಸ್ಸು ಮತ್ತು ಉಷ್ಣವು ಅಳಿಯುತ್ತದೆಯೋ ಆಗ ಸಕಲ ಇಂದ್ರಿಯಗಳೂ ಮನಸ್ಸಿನಲ್ಲಿ ಐಕ್ಯವಾಗಿ ಆ ತೇಜಸ್ಸು ಭೂಮಿಯ ಮೇಲಿನ ಇನ್ನೊಂದು ಜನ್ಮದಲ್ಲಿ ಸೇರುತ್ತದೆ.

**ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿಃ ; ಪ್ರಾಣಸ್ತೇಜಸಾಯುಕ್ತಃ ।**
**ಸಹಾऽऽತ್ಮನಾ ಯಥಾಸಂಕಲ್ಪಿತಂ ಲೋಕಂ ನಯತಿ ॥೧೦॥**

ಈ ಜೀವನು ಮರಣಕಾಲದಲ್ಲಿ ಯಾವ ಚಿತ್ತದಿಂದ ಕೂಡಿರುವನೋ ಅದರಿಂದ ಪ್ರಾಣವನ್ನು ಹೊಂದುತ್ತಾನೆ. ಪ್ರಾಣನು ತೇಜಸ್ಸಿನಿಂದ ಕೂಡಿ ಆತ್ಮನೊಂದಿಗೆ ಅವನ ಸಂಕಲ್ಪಕ್ಕೆ ಅನುಸಾರವಾದ ಲೋಕಕ್ಕೆ ಕೊಂಡೊಯ್ಯುತ್ತಾನೆ.

**ಯ ಏವಂ ವಿದ್ವಾನ್ ಪ್ರಾಣಂ ವೇದ । ನ ಹಾಸ್ಯ ಪ್ರಜಾ**
**ಹೀಯತೇऽಮೃತೋ ಭವತಿ ತದೇಷ ಶ್ಲೋಕಃ ॥೧೧॥**

ಈ ರೀತಿಯಾದ ಪ್ರಾಣವೇದವನ್ನು ಯಾವ ವಿದ್ವಾಂಸರು ಅರಿತು ಕೊಳ್ಳುತ್ತಾರೋ ಅವರ ವಂಶವು ಅಭಿವೃದ್ಧಿಯಾಗುತ್ತದೆ ಮತ್ತು ಅವರು ಅಮೃತತ್ವವನ್ನು ಪಡೆಯುತ್ತಾರೆ. ಈ ರೀತಿಯಾಗಿ ಈ ಮಂತ್ರವಿರುತ್ತದೆ.

ಉತ್ಪತ್ತಿಮಾಯತಿಂ ಸ್ಥಾನಂ । ವಿಭುತ್ವಂ ಚೈವ ಪಂಚಧಾ।
ಅಧ್ಯಾತ್ಮಂ ಚೈವ ಪ್ರಾಣಸ್ಯ । ವಿಜ್ಞಾಯಾಮೃತಮಶ್ನುತೇ ॥
ವಿಜ್ಞಾಯಾಮೃತಮಶ್ನುತ ಇತಿ ॥೧೨॥

ಯಾರು ಪ್ರಾಣನ ಉತ್ಪತ್ತಿ, ಮನಸ್ಸಿನ ಕರ್ಮದಿಂದ ಶರೀರಕ್ಕೆ ಅವನ ಆಗಮನ, ಪಾಯೂಪಸ್ಥಗಳಲ್ಲಿ ಅವನ ಸ್ಥಾನ, ಅವನ ಐದು ಬಗೆಯ ವಿಭುತ್ವ ಮತ್ತು ಅಧ್ಯಾತ್ಮ ಇವುಗಳನ್ನರಿಯುತ್ತಾರೋ ಅವರು ಅಮೃತವನ್ನು ಪೊಂದುತ್ತಾರೆ. ಅರಿತುಕೊಂಡು ಅಮೃತವನ್ನು ಹೊಂದುತ್ತಾರೆ.

## ಅಥ ಚತುರ್ಥಪ್ರಶ್ನಃ

ಅಥ ಹೈನಂ ಸೌರ್ಯಾಯಣೀ ಗಾರ್ಗ್ಯಃ ಪಪ್ರಚ್ಛ । ಭಗವನ್ನೇತಸ್ಮಿನ್ ಪುರುಷೇ ಕಾನಿ ಸ್ವಪಂತಿ ? ಕಾನ್ಯಸ್ಮಿಂಜಾಗ್ರತಿ ? ಕತರ ಏಷ ದೇವಃ ಸ್ವಪ್ನಾನ್ ಪಶ್ಯತಿ ? ಕಸ್ಯೈತತ್ ಸುಖಂ ಭವತಿ ? ಕಸ್ಮಿನ್ನುಸರ್ವೇ ಸಂಪ್ರತಿಷ್ಠಿತಾ ಭವಂತೀತಿ ॥೧॥

ಅನಂತರ ಸೌರ್ಯಾಯಣೀ ಗಾರ್ಗ್ಯನು ಪಿಪ್ಪಲಾದರನ್ನು ಪ್ರಶ್ನಿಸಿದನು. "ಭಗವನ್ ಅವಯವಗಳಿಂದ ಕೂಡಿದ ಈ ಶರೀರದಲ್ಲಿ ಯಾವುವು ನಿದ್ರಿಸುವುವು ? ಯಾವುವು ಎಚ್ಚೆತ್ತಿರುವುವು ? ಇವೆರಡರಲ್ಲಿ ಯಾವ ದೇವನು ಸ್ವಪ್ನಗಳನ್ನು ನೋಡುವನು ? ಯಾರಿಗೆ ಈ ಸುಖವು ಉಂಟಾಗುವುದು. ಯಾರಲ್ಲಿ ಎಲ್ಲವೂ ಏಕೀಭೂತವಾಗುವುವು ? ತಿಳಿಸಿರಿ" ಎಂದನು.

ತಸ್ಮೈ ಸ ಹೋವಾಚ । ಯಥಾ ಗಾರ್ಗ್ಯ, ಮರೀಚಯೋಽರ್ಕಸ್ಯಾಸ್ತಂ ಗಚ್ಛತಃ ಸರ್ವಾ ಏತಸ್ಮಿಂಸ್ತೇಜೋಮಂಡಲ ಏಕೀಭವಂತಿ । ತಾಃ ಪುನಃ ಪುನರುದಯತಃ ಪ್ರಚರಂತ್ಯೇವಂ ಹ ವೈ ತತ್ಸರ್ವಂ ಪರೇ ದೇವೇ ಮನಸ್ಯೇಕೀಭವತಿ । ತೇನ ತರ್ಹ್ಯೇಷ ಪುರುಷೋ ನ ಶೃಣೋತಿ ನ ಪಶ್ಯತಿ ನ ಜಿಘ್ರತಿ ನ ರಸಯತೇ ನ ಸ್ಪೃಶತೇ ನಾಭಿವದತೇ ನಾದತ್ತೇ ನಾನಂದಯತೇ ನ ವಿಸೃಜತೇ ನೇಯಾಯತೇ ಸ್ವಪಿತೀತ್ಯಾಚಕ್ಷತೇ ॥೨॥

ಪಿಪ್ಪಲಾದರು ಅವನಿಗೆ ಹೇಳಿದರು "ಎಲೈ ಗಾರ್ಗ್ಯನೇ ಅಸ್ತವಾಗು ತ್ತಿರುವ ಸೂರ್ಯನ ಕಿರಣಗಳೆಲ್ಲ ಈ ತೇಜೋಮಂಡಲದಲ್ಲಿ ಹೇಗೆ ಒಂದಾಗು ತ್ತಿವೆಯೋ ; ಪುನಹ ಉದಯಿಸುತ್ತಿರುವ ಸೂರ್ಯನ ಆ ಕಿರಣಗಳು ಪುನಹ ಹೇಗೆ ಪ್ರಸರಿಸುತ್ತವೆಯೋ ಹಾಗೆಯೇ ಈ ವಿಷಯೇಂದ್ರಿಯ ಸಮೂಹ ವೆಲ್ಲವೂ ಪರಮಪುರುಷನಾದ ಮನಸ್ಸಿನಲ್ಲಿ ಒಂದಾಗುತ್ತದೆ. ಆಗ ಪುರುಷನು ಕೇಳುವುದಿಲ್ಲ, ನೋಡುವುದಿಲ್ಲ, ಮೂಸುವುದಿಲ್ಲ, ರುಚಿ ನೋಡುವುದಿಲ್ಲ, ಸ್ಪರ್ಶಿಸುವುದಿಲ್ಲ, ಮಾತನಾಡುವುದಿಲ್ಲ, ತೆಗೆದುಕೊಳ್ಳುವುದಿಲ್ಲ, ಆನಂದಪಡು ವುದಿಲ್ಲ, ಬರಲಾರನು, ಹೋಗಲಾರನು. ಆಗ ಅವನು ನಿದ್ರಾವಸ್ಥೆಯಲ್ಲಿರುವ ನೆಂದು ಜನರು ಹೇಳುತ್ತಾರೆ.

**ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ । ಗಾರ್ಹ ಪತ್ಯೋ ಹ ವಾ ಏಷೋಽಪಾನೋ ವ್ಯಾನೋಽನ್ವಾಹಾರ್ಯ ಪಚನೋ ಯದ್ಗಾರ್ಹಪತ್ಯಾತ್ ಪ್ರಣೀಯತೇ ಪ್ರಣಯನಾದಾ- ಹವನೀಯಃ ಪ್ರಾಣಃ ॥೩॥**

ಆ ನಿದ್ರಾವಸ್ಥೆಯಲ್ಲಿ ಪ್ರಾಣಾಗ್ನಿಯು ಜಾಗೃತನಾಗಿದ್ದು ಕಾವಲು ಕಾಯುತ್ತಿರುತ್ತದೆ. ಅಪಾನವಾಯುವು ಗಾರ್ಹಪತ್ಯಾಗ್ನಿರೂಪದಿಂದಲೂ, ವ್ಯಾನವು ದಕ್ಷಿಣಾಗ್ನಿ ಪ್ರಣಯನವಾದ ಗಾರ್ಹಪತ್ಯದಿಂದ ತೆಗೆದುಕೊಳ್ಳಲ್ಪ ಟ್ಟಿದೆಯಾದುದರಿಂದ ಪ್ರಾಣವು ಆಹವನೀಯಾಗ್ನಿ ಎಂದು ಕರೆಯಲ್ಪಟ್ಟಿರು ತ್ತದೆ. ವ್ಯಾನವು ಆಹಾರವನ್ನು ಪಚನಮಾಡುತ್ತದೆ.

**ಯದುಚ್ಛ್ವಾಸನಿಃಶ್ವಾಸಾವೇತಾವಾಹುತೀ ಸಮಂ ನಯತೀತಿ ಸ ಸಮಾನಃ । ಮನೋ ಹ ವಾವ ಯಜಮಾನ, ಇಷ್ಟಫಲ ಮೇವೋದಾನಃ ಸ ಏನಂ ಯಜಮಾನಮಹರಹರ್ಬ್ರಹ್ಮ ಗಮ ಯತಿ ॥೪॥**

ಉಚ್ಛ್ವಾಸ ನಿಃಶ್ವಾಸಗಳೆಂಬ ಈ ಆಹುತಿಗಳನ್ನು ಸಮಾನವಾಗಿ ಒಯ್ಯುವುದರಿಂದ ಆ ಸಮಾನವು ಅಗ್ನಿಹೋತೃವು. ಮನಸ್ಸೇ ಯಜಮಾ

ನನು, ಯಾಗ ಫಲವೇ ಉದಾನವು. ಆ ಉದಾನವು ಈ ಯಜಮಾನನನ್ನು ಪ್ರತಿದಿನವೂ ಬ್ರಹ್ಮನಬಳಿಗೆ ಕರೆದುಕೊಂಡು ಹೋಗುತ್ತದೆ.

**ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ । ಯದ್ದೃಷ್ಟಂ ದೃಷ್ಟಮನುಪಶ್ಯತಿ; ಶ್ರುತಂ ಶ್ರುತಮೇವಾರ್ಥಮನುಶೃಣೋತಿ, ದೇಶದಿಗಂತರೈಶ್ಚ ಪ್ರತ್ಯನುಭೂತಂ ಪುನಃ ಪುನಃ ಪ್ರತ್ಯನುಭವತಿ; ದೃಷ್ಟಂ ಚಾದೃಷ್ಟಂ ಚ, ಶ್ರುತಂ ಚಾಶ್ರುತಂ ಚಾನುಭೂತಂ ಚಾನನುಭೂತಂ ಚ, ಸಚ್ಚಾಸಚ್ಚ, ಸರ್ವಂ ಪಶ್ಯತಿ ಸರ್ವಃ ಪಶ್ಯತಿ ॥೫॥**

ಸ್ವಪ್ನಾವಸ್ಥೆಯಲ್ಲಿ ಈ ಮನಸ್ಸೆಂಬ ದೇವನು ಊಹಾಮಹಿಮೆಯನ್ನು ಅನುಭವಿಸುತ್ತಾನೆ. ಯಾವುದು ನೋಡಲ್ಪಟ್ಟಿದೆಯೋ ಅದನ್ನೇ ನೋಡುತ್ತಾನೆ. ಯಾವ ವಿಷಯವು ಕೇಳಲ್ಪಟ್ಟಿದೆಯೋ ಅದನ್ನೇ ಕೇಳುತ್ತಾನೆ. ಬೇರೆ ಬೇರೆ ದೇಶಗಳಲ್ಲೂ ದಿಕ್ಕುಗಳಲ್ಲೂ ಯಾವುದು ಅನುಭವಿಸಲ್ಪಟ್ಟಿದೆಯೋ ಅದನ್ನೇ ಪುನಃ ಪುನಃ ಅನುಭವಿಸುತ್ತಾನೆ. ನೋಡಿದ್ದು ನೋಡದಿರುವುದು, ಕೇಳಿದ್ದು, ಕೇಳದೆ ಇರುವುದೂ, ತಿಳಿದಿರುವುದು ತಿಳಿಯದೆ ಇರುವುದು, ಇರುವುದು, ಇಲ್ಲದಿರುವುದು ಇವೆಲ್ಲವನ್ನೂ ನೋಡುತ್ತಿರುತ್ತಾನೆ. ಸರ್ವ ಮನೋವಾಸನಗಳೆಂಬ ಉಪಾಧಿ ಉಳ್ಳವನಾಗಿ ಎಲ್ಲವನ್ನೂ ನೋಡುತ್ತಾನೆ.

**ಸ ಯದಾ ತೇಜಸಾಭಿಭೂತೋ ಭವತಿ । ಅತ್ರೈಷ ದೇವಃ ಸ್ವಪ್ನಾನ್ನ ಪಶ್ಯತ್ಯಥ ತದೈತಸ್ಮಿಂಚ್ಛರೀರ ಏತತ್ ಸುಖಂ ಭವತಿ ॥೬॥**

ಯಾವಾಗ ಮನೋರೂಪನಾದ ದೇವನು ತೇಜಸ್ಸಿನಿಂದ ಅಭಿಭೂತನಾಗುವನೋ ಆಗ ಮನೋದೇವರು ಕನಸನ್ನು ಕಾಣಲಾರದು. ಆಗ ಅದು ಮಾನವ ಶರೀರದಲ್ಲೇ ಎಲ್ಲ ವಿಧವಾದ ಸುಖಾನುಭೂತಿಯನ್ನು ಹೊಂದುತ್ತದೆ.

**ಸ ಯಥಾ ಸೋಽಮ್ಯ ವಯಾಂಸಿ ವಾಸೋ ವೃಕ್ಷಂ ಸಂಪ್ರತಿಷ್ಠಂತೇ । ಏವಂ ಹ ವೈ ತತ್ಸರ್ವಂ ಪರ ಆತ್ಮನಿ ಸಂಪ್ರತಿಷ್ಠತೇ ॥೭॥**

" ಎಲೈ ಗಾರ್ಗ್ಯನೇ ಕೇಳು ಒಂದು ದೃಷ್ಟಾಂತ ಉಂಟು ಯಾವ ರೀತಿ ಪಕ್ಷಿಗಳು ಮರಗಳಮೇಲಿನ ತಮ್ಮ ಗೂಡುಗಳನ್ನು ಹುಡುಕಿಕೊಂಡು ಹೋಗುತ್ತವೋ ಹಾಗೆ ಅದೆಲ್ಲವೂ ಹೊರಟು ಪರಮಾತ್ಮನನ್ನು ಸೇರುತ್ತವೆ "

**ಪೃಥಿವೀ ಚ ಪೃಥಿವೀಮಾತ್ರಾ ಚಾಪಶ್ಚಾಪೋಮಾತ್ರಾ ಚ, ತೇಜಶ್ಚ ತೇಜೋಮಾತ್ರಾ ಚ, ವಾಯುಶ್ಚ ವಾಯುಮಾತ್ರಾ ಚ, ಆಕಾಶಶ್ಚಾಕಾಶಮಾತ್ರಾ ಚ, ಚಕ್ಷುಶ್ಚ ದ್ರಷ್ಟವ್ಯಂ ಚ, ಶ್ರೋತ್ರಂ ಚ ಶ್ರೋತವ್ಯಂ ಚ, ಘ್ರಾಣಂ ಚ ಘ್ರಾತವ್ಯಂ ಚ, ರಸಶ್ಚ ರಸಯಿತವ್ಯಂ ಚ, ತ್ವಕ್ ಚ ಸ್ಪರ್ಶಯಿತವ್ಯಂ ಚ, ವಾಕ್ ಚ ವಕ್ತವ್ಯಂ ಚ, ಹಸ್ತೌ ಚಾದಾತವ್ಯಂ ಚ, ಓಪಸ್ಥಶ್ಚಾನಂದಯಿತವ್ಯಂ ಚ, ಪಾಯುಶ್ಚ ವಿಸರ್ಜಯಿತವ್ಯಂ ಚ, ಪಾದೌ ಚ ಗಂತವ್ಯಂ ಚ, ಮನಶ್ಚ ಮಂತವ್ಯಂ ಚ, ಬುದ್ಧಿಶ್ಚ ಬೋದ್ಧವ್ಯಂ ಚಾಹಂಕಾರಶ್ಚಾಹಂಕರ್ತವ್ಯಂ ಚ, ಚಿತ್ತಂ ಚ ಚೇತಯಿತವ್ಯಂ ಚ, ತೇಜಶ್ಚ ವಿದ್ಯೋತಯಿತವ್ಯಂ ಚ, ಪ್ರಾಣಶ್ಚ ವಿಧಾರಯಿತವ್ಯಂ ಚ ॥೭॥**

ಪೃಥ್ವಿ ಮತ್ತು ಗಂಧ ತನ್ಮಾತ್ರೆ. ನೀರು ಮತ್ತು ರಸ ತನ್ಮಾತ್ರೆ, ತೇಜಸ್ಸು ಮತ್ತು ರೂಪ ತನ್ಮಾತ್ರೆ, ವಾಯು ಮತ್ತು ಸ್ಪರ್ಶ ತನ್ಮಾತ್ರೆ. ಆಕಾಶ ಮತ್ತು ಶಬ್ದ ತನ್ಮಾತ್ರೆ, ಕಣ್ಣು ಮತ್ತು ಆದರಿಂದ ನೋಡತಕ್ಕ ರೂಪ, ಕಿವಿ ಮತ್ತು ಅದರಿಂದ ಕೇಳುವ ಶಬ್ದ, ಮೂಗು ಮತ್ತು ಆದರಿಂದ ಮೂಸಲ್ಪಡುವ ಗಂಧ, ನಾಲಗೆ ಮತ್ತು ರಸ, ಸ್ಪರ್ಶೇಂದ್ರಿಯ ಮತ್ತು ಅದರ ವಿಷಯ, ವಾಗಿಂದ್ರಿಯ ಮತ್ತು ವಾಕ್ಯ, ಹಸ್ತಗಳು ಮತ್ತು ಹಿಡಿಯಲ್ಪಡತಕ್ಕ ವಸ್ತು, ಗುಪ್ತೇಂದ್ರಿಯಗಳು ಮತ್ತು ಆದರ ಆನಂದ, ಗುದಸ್ಥಾನ ಮತ್ತು ಅದರ ವಿಸರ್ಜನೆ, ಕಾಲು ಮತ್ತು ಅದರ ನಡಿಗೆ, ಮಾನಸ್ಸು ಮತ್ತು ಮನನೀಯ ವಿಷಯ, ಬುದ್ಧಿ ಮತ್ತು ಅದರ ತಿಳುವಳಿಕೆ, ಅಹಂಕಾರ ಮತ್ತು

ಅವರ ವಿಷಯ. ಚಿತ್ತ ಮತ್ತು ಅರಿಯಬೇಕಾಗುವ ವಿಷಯ, ತೇಜಸ್ಸು ಮತ್ತು ಪ್ರಕಾಶಿಸಲ್ಪಡತಕ್ಕ ವಿಷಯ, ಪ್ರಾಣ ಮತ್ತು ಅವನಲ್ಲಿ ಧರಿಸಲ್ಪಟ್ಟಿರುವ ಎಲ್ಲ ಜಗತ್ತು, ಇವೆಲ್ಲವೂ ಆತ್ಮನಲ್ಲಿ ನೆಲೆಸಿರುವುವು.

**ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮಂತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಪುರುಷಃ । ಸ ಪರೇಽಕ್ಷರ ಆತ್ಮನಿ ಸಂಪ್ರತಿಷ್ಠತೇ ॥೯॥**

ಯಾವುದರಿಂದ ನೋಡುತ್ತೇವೋ, ಮುಟ್ಟುತ್ತೇವೋ, ಕೇಳುತ್ತೇವೋ, ಆಘ್ರಾಣಿಸುತ್ತೇವೋ, ರುಚಿ ನೋಡುತ್ತೇವೋ, ಅಭಿಪ್ರಾಯಪಡುತ್ತೇವೋ, ನಟಿಸುತ್ತೇವೋ ಇವೆಲ್ಲವೂ ಹೃದಯದಲ್ಲಿರುವ ಪುರುಷನಿಂದ ನಡೆಸಲ್ಪಡುತ್ತದೆ. ಇವನು ಪರಮವೂ ಅಕ್ಷಯವೂ ಆದ ಆತ್ಮನಲ್ಲಿ ನೆಲೆಸಿರುತ್ತಾನೆ.

**ಪರಮೇವಾಕ್ಷರಂ ಪ್ರತಿಪದ್ಯತೇ ಸ ಯೋ ಹ ವೈ ತದಚ್ಛಾಯಮಶರೀರಮಲೋಹಿತಂ ಶುಭ್ರಮಕ್ಷರಂ ವೇದಯತೇ ಯಸ್ತು ಸೋಮ್ಯ । ಸ ಸರ್ವಜ್ಞಃ ಸರ್ವೋ ಭವತಿ ತದೇಶ ಶ್ಲೋಕಃ ॥೧೦॥**

ಯಾವನು ನೆರಳಿಲ್ಲದ, ಶರೀರವಿಲ್ಲದ, ಬಣ್ಣವಿಲ್ಲದ ಆ ಬೀಜಾಕ್ಷರವನ್ನು ತಿಳಿದುಕೊಳ್ಳನೋ ಅವನು ಎಲೈ ಸೋಮ್ಯನೇ ಪರಮಾಕ್ಷರವನ್ನೇ ಹೊಂದುತ್ತಾನೆ. ಯಾರು ಹೀಗೆ ತಿಳಿದುಕೊಳ್ಳುವರೋ ಅವರು ಸರ್ವಜ್ಞರು ಹೌದು ಮತ್ತು ಸರ್ವವೂ ಆಗುವರು. ಈ ವಿಷಯದಲ್ಲಿ ಈ ಮಂತ್ರವುಂಟು.

**ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ<br>ಪ್ರಾಣಾ ಭೂತಾನಿ ಸಂಪ್ರತಿಷ್ಠಂತಿ ಯತ್ರ ।<br>ತದಕ್ಷರಂ ವೇದಯತೇ ಯಸ್ತು ಸೋಮ್ಯ<br>ಸ ಸರ್ವಜ್ಞಃ ಸರ್ವಮೇವಾವಿವೇಶೇತಿ ॥೧೧॥**

ಎಲೈ ಸೋಮ್ಯ, ಎಲ್ಲ ದೇವತೆಗಳೊಂದಿಗೆ ವಿಜ್ಞಾನಾತ್ಮನು ಪ್ರಾಣಗಳು ಮತ್ತು ಭೂತಗಳು ನೆಲಸುವ ಆ ಅಕ್ಷರವನ್ನು ಯಾವನು ತಿಳಿದುಕೊಳ್ಳುವನೋ ಆ ಸರ್ವಜ್ಞನು ಸರ್ವವನ್ನೂ ಪ್ರವೇಶಿಸುವನು.

## ಅಥ ಪಂಚಮ ಪ್ರಶ್ನಃ

**ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ । ಸ ಯೋ ಹ ವೈ ತದ್ಭಗವನ್ ಮನುಷ್ಯೇಷು ಪ್ರಾಯಣಾಂತವೋಂಕಾರಮಭಿಧ್ಯಾಯೀತ, ಕತಮಂ ವಾವ ಸ ತೇನ ಲೋಕಂ ಜಯತೀತಿ । ತಸ್ಮೈ ಸ ಹೋವಾಚ ॥೧॥**

ಆನಂತರ ಶೈಬ್ಯ ಸತ್ಯಕಾಮನು ಪಿಪ್ಪಲಾದರನ್ನು ಪ್ರಶ್ನಿಸುತ್ತಾನೆ "ಭಗವನ್ ಮನುಷ್ಯರಲ್ಲಿ ಯಾರು ಅಂತ್ಯಕಾಲದವರೆಗೆ ಓಂಕಾರ ಬೀಜಾಕ್ಷರವನ್ನು ಕುರಿತು ತಪಸ್ಸನ್ನಾಚರಿಸುವರೋ ಅವರು ಅದರ ಪ್ರಭಾವದಿಂದ ಯಾವ ಲೋಕವನ್ನು ಜಯಿಸುತ್ತಾರೆ ? ಅದಕ್ಕೆ ಪಿಪ್ಪಲಾದರು ಹೇಳಿದರು.

**ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ವಿದ್ವಾನೇತೇ ನೈವಾಯತನೇನೈಕತರಮನ್ವೇತಿ ॥೨॥**

"ಎಲೈ ಸತ್ಯಕಾಮ ಓಂಕಾರವು ಪರಬ್ರಹ್ಮವೂ, ಅಪರಬ್ರಹ್ಮವೂ ಆಗಿದೆ. ಆದುದರಿಂದ ತಿಳಿದವನು ಇದರಿಂದಲೇ ಇವೆರಡರಲ್ಲಿ ಒಂದನ್ನು ಓಂಕಾರರೂಪವಾದ ಮಾರ್ಗದಿಂದಲೇ ಅನುಸರಿಸುತ್ತಾನೆ.

**ಸ ಯದ್ಯೇಕಮಾತ್ರಮಭಿಧ್ಯಾಯೀತ, ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿಸಂಪದ್ಯತೇ । ತಮೃಚೋ ಮನುಷ್ಯಲೋಕಮುಪನಯಂತೇ, ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ ॥೩॥**

ಓಂಕಾರದ ಮೂರು ಮಾತ್ರೆಗಳ ಪೈಕಿ ಒಂದನ್ನು ಧ್ಯಾನಿಸಿದಲ್ಲೂ ಅವನು ಅದರಿಂದಲೇ ಅಸ್ತಿತ್ವವನ್ನು ಪಡೆದವನಾಗಿ ಜಗತ್ತಿನಲ್ಲಿ ಕೂಡಲೇ ಶ್ರೇಷ್ಠತೆಯನ್ನು ಹೊಂದುತ್ತಾನೆ. ಋಕ್ಕುಗಳು ಅವನನ್ನು ಮನುಷ್ಯಲೋಕಕ್ಕೆ ಸೇರಿಸುತ್ತವೆ. ಅಲ್ಲಿ ತಪಸ್ಸಿನಿಂದಲೂ, ಬ್ರಹ್ಮಚರ್ಯದಿಂದಲೂ, ಶ್ರದ್ಧೆಯಿಂದಲೂ ಕೂಡಿದವನಾಗಿ ಮಹಿಮೆಯನ್ನು ಅನುಭವಿಸುತ್ತಾನೆ.

**ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽಂತರಿಕ್ಷಂ ಯಜುರ್ಭಿರುನ್ನೀಯತೇ ಸೋಮಲೋಕಂ । ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ ॥೪॥**

ಅನಂತರ ಎರಡು ಮಾತ್ರೆಗಳುಳ್ಳ ಆ ಪರಬ್ರಹ್ಮವಾಚಕವಾದ ಪ್ರಣವದಿಂದ ಯಾರ ಮನಸ್ಸಿನಲ್ಲಿ ಆ ಪರಬ್ರಹ್ಮಧ್ಯಾನವು ಉಂಟಾಗುತ್ತದೆಯೋ ಅವನು ಯಜುಸ್ಸುಗಳಿಂದ ಅಂತರಿಕ್ಷದಲ್ಲಿರುವ ಸೋಮಲೋಕಕ್ಕೆ ತೆರಳುತ್ತಾನೆ. ಅವನು ಸೋಮಲೋಕದಲ್ಲಿ ವಿಭೂತಿಯನ್ನು ಅನುಭವಿಸಿ ಪುಣ್ಯಕ್ಷಯವಾದಮೇಲೆ ಹಿಂದಿರುಗುತ್ತಾನೆ.

**ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ, ಸ ತೇಜಸಿ ಸೂರ್ಯೇ ಸಂಪನ್ನಃ । ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ, ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ತದೇತೌ ಶ್ಲೋಕೌ ಭವತಃ ॥೫॥**

ಆದರೆ ಯಾವನು ಮೂರು ಮಾತ್ರೆಗಳುಳ್ಳ ಓಂ ಎಂಬ ಈ ಅಕ್ಷರದಿಂದಲೇ ಈ ಪರಮಪುರುಷನನ್ನು ಅಭಿಧ್ಯಾನಿಸುವನೋ ಅವನು ಜ್ಯೋತಿರ್ಮಯನಾದ ಸೂರ್ಯನಲ್ಲಿ ಒಂದಾಗುತ್ತಾನೆ. ಸರ್ಪವು ಹೇಗೆ ಪೊರೆಯಿಂದ ಹೊರಕ್ಕೆ ಬರುತ್ತದೆಯೋ ಹಾಗೆಯೇ ಪಾಪಗಳಿಂದ ಮುಕ್ತನಾಗುತ್ತಾನೆ. ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ. ಅವನು

ಶ್ರೇಷ್ಠನಾದ ಹಿರಣ್ಯಗರ್ಭನಿಗಿಂತಲೂ ಶ್ರೇಷ್ಠನಾದ ಮತ್ತು ಎಲ್ಲ ಶರೀರ ಗಳಲ್ಲೂ ಪ್ರವೇಶಿಸಿರುವ ಪುರುಷನನ್ನು ಸಾಕ್ಷಾತ್ಕರಿಸುತ್ತಾನೆ. ಈ ವಿಷಯ ದಲ್ಲಿ ಈ ಎರಡು ಮಾತ್ರೆಗಳಿರುತ್ತವೆ.

ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ
ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।
ಕ್ರಿಯಾಸು ಬಾಹ್ಯಾಭ್ಯಂತರ ಮಧ್ಯಮಾಸು
ಸಮ್ಯಕ್ ಪ್ರಯುಕ್ತಾಸು ನ ಕಂಪತೇ ಜ್ಞಃ ॥೬॥

ಈ ಮೂರು ಮಾತ್ರೆಗಳನ್ನು ಅತ್ಯಂತ ದ್ರುತವಾದ ಉಚ್ಚಾರಣೆ ಯಿಂದಲೂ ಅತ್ಯಂತ ವಿಪ್ರಯುಕ್ತವಾಗಿ ಉಚ್ಚರಿಸಿದರೆ ಇವು ಮೃತ್ಯುವನ್ನು ತರುವುವು, ಹೊರಗಿನ, ಒಳಗಿನ, ಮಧ್ಯದ ಕ್ರಿಯೆಗಳಲ್ಲಿರುವ ಮಾತ್ರೆಗಳನ್ನು ಚೆನ್ನಾಗಿ ಉಚ್ಚರಿಸಿದರೆ ಆ ಪ್ರಯೋಗವನ್ನು ತಿಳಿದವನು ಕಂಪಿಸುವುದಿಲ್ಲ.

ಋಗ್ಭಿರೇತಂ ಯಜುರ್ಭಿರಂತರಿಕ್ಷಂ
ಸಾಮಭಿರ್ಯತ್ತತ್ ಕವಯೋ ವೇದಯಂತೇ ।
ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್
ಯತ್ತಚ್ಛಾಂತಮಜರಮಮೃತಮಭಯಂ ಪರಂಚೇತಿ ॥೭॥

ಋಗ್ವೇದವು ಭೂಲೋಕಕ್ಕೂ ಯಜುರ್ವೇದವು ಗಗನಲೋಕಕ್ಕೂ ಸಾಮವೇದವು ಕವಿಗಳು ತಿಳಿದಿರುವ ಲೋಕಕ್ಕೂ ಮುನ್ನಡೆಸುತ್ತದೆ. ಅವನ್ನು ವಿದ್ವಾಂಸನು ಓಂಕಾರವೆಂಬ ಆಲಂಬನದಿಂದಲೇ ಹೊಂದುತ್ತಾನೆ. ಅವನು ಅಲ್ಲಿ ಶಾಂತವಾದ, ವಯೋಮಾನವಿಲ್ಲದ, ಅಮೃತವಾದ, ಅಭಯ ವಾದ ಪರಬ್ರಹ್ಮವನ್ನೂ ಓಂಕಾರದಿಂದಲೇ ಹೊಂದುತ್ತಾನೆ.

## ಅಥ ಷಷ್ಠಃ ಪ್ರಶ್ನಃ

**ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ । ಭಗವನ್ ಹಿರಣ್ಯನಾಭಃ ಕೌಸಲ್ಯೋ ರಾಜಪುತ್ರೋ ಮಾಮುಪೇತ್ಯೈತಂ ಪ್ರಶ್ನಮಪೃಚ್ಛತ । "ಷೋಡಶ ಕಲಂ ಭಾರದ್ವಾಜ ಪುರುಷಂ ವೇತ್ಥ ?" ತಮಹಂ ಕುಮಾರಮಬ್ರುವಂ "ನಾಹಮಿಮಂ ವೇದ, ಯದ್ಯಹಮಿಮಮವೇದಿಷಂ ಕಥಂ ತೇ ನಾವಕ್ಷ್ಯಂ" ಇತಿ; ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ ತಸ್ಮಾನ್ನಾರ್ಹಾಮ್ಯನೃತಂ ವಕ್ತುಂ; " ಸ ತೂಷ್ಣೀಂ ರಥಮಾರುಹ್ಯ ಪ್ರವವ್ರಾಜ । ತಂ ತ್ವಾ ಪೃಚ್ಛಾಮಿ "ಕ್ವಾಸೌ ಪುರುಷ" ಇತಿ ॥೧॥**

ತರುವಾಯ ಸುಕೇಶ ಭಾರಧ್ವಾಜನು ಪಿಪ್ಪಲಾದರನ್ನು ಕೇಳುತ್ತಾನೆ "ಭಗವನ್ ಒಂದು ದಿನ ಕೋಸಲದೇಶದ ರಾಜಪುತ್ರನಾದ ಹಿರಣ್ಯನಾಭನು ನನ್ನ ಬಳಿಗೆ ಬಂದು ಈ ರೀತಿ ಪ್ರಶ್ನಿಸಿದನು, 'ಓ ಭಾರದ್ವಾಜರೇ ಷೋಡಶ ಕಲಾಪರಿಪೂರ್ಣನಾದ ಪುರುಷನೊಬ್ಬನಿರುವುದೆಂಬುದನ್ನು ನೀವು ಬಲ್ಲಿರಾ'. ನಾನು ಆ ಹುಡುಗನಿಗೆ ಹೇಳಿದೆನು 'ನಾನು ಅವನ ಬಗ್ಗೆ ತಿಳಿದಿಲ್ಲ, ನನಗೆ ಆತನ ವಿಚಾರವು ತಿಳಿದಿದ್ದಲ್ಲಿ ನಿನಗೆ ಖಂಡಿತ ತಿಳಿಸುತ್ತಿದ್ದೆ, ನಿನಗೆ ನಾನು ಸುಳ್ಳು ಹೇಳಲಾರೆ, ಏಕೆಂದರೆ ಸುಳ್ಳು ಹೇಳುವವರು ಬುಡಸಮೇತವಾಗಿ ಬಾಡುತ್ತಾರೆ' ಆಗ ಅವನು ಮೌನವಾಗಿ ತನ್ನ ರಥವನ್ನು ಹತ್ತಿ ಹೊರಟು ಹೋದನು. ಅಂತಹವನ ವಿಷಯವಾಗಿ ಈಗ ನಿಮ್ಮನ್ನು ಕೇಳುತ್ತಿದ್ದೇನೆ, ಆ ಪುರುಷನು ಎಲ್ಲಿರುವನು ? ತಾವು ದಯವಿಟ್ಟು ತಿಳಿಸಬೇಕು."

**ತಸ್ಮೈ ಸ ಹೋವಾಚ । ಇಹೈವಾಂತಃಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾ ಷೋಡಶ ಕಲಾಃ ಪ್ರಭವಂತೀತಿ ॥೨॥**

ಅವನಿಗೆ ಪಿಪ್ಪಲಾದರು ಹೇಳುತ್ತಾರೆ "ಓ ಸುಪುತ್ರನೇ ಯಾವನಲ್ಲಿ ಈ ಹದಿನಾರು ಕಲೆಗಳು ಉತ್ಪನ್ನವಾಗಿವೆಯೋ ಆ ಪುರುಷನು ಇಲ್ಲೇ

ಇದ್ದಾನೆ ಸಮಸ್ತ ಜೀವರಾಶಿಗಳ ಹೃದಯಕಮಲಗಳಲ್ಲೂ ನೆಲೆಗೊಂಡಿದ್ದಾನೆ.

**ಸ ಈಕ್ಷಾಂ ಚಕ್ರೇ । ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ॥೩॥**

ಷೋಡಶಕಲೆಗಳುಳ್ಳ ಪುರುಷನು ಆಲೋಚನೆಮಾಡಿದನು, "ನಾನು ಯಾರನ್ನು ಸೃಷ್ಟಿಸುತ್ತೇನೋ ಅದರಲ್ಲೇ ಸೃಷ್ಟಿಸಲ್ಪಡುತ್ತೇನೆ. ಅವನು ಎಲ್ಲಿ ವಾಸಿಸುತ್ತಾನೋ ಅದೇ ನನ್ನ ನಿವಾಸವೂ ಆಗಿರುತ್ತೆ. ಇದರ ಅರ್ಥವೇನು ?"

**ಸ ಪ್ರಾಣಮಸೃಜತ; ಪ್ರಾಣಾಚ್ಛ್ರದ್ಧಾಂ, ಖಂ ವಾಯು ಜ್ಯೋತಿರಾಪಃ, ಪೃಥಿವೀಂದ್ರಿಯಂ ಮನಃ, ಅನ್ನಮನ್ನಾದ್ವೀರ್ಯಂ ತಪೋ ಮಂತ್ರಾಃ, ಕರ್ಮ, ಲೋಕಾ, ಲೋಕೇಷು ಚ ನಾಮ ಚ ॥೪॥**

ಮೊದಲು ಭಗವಂತನು ಪ್ರಾಣವನ್ನು ಸೃಷ್ಟಿಸಿದನು. ಪ್ರಾಣದಿಂದ ಶ್ರದ್ಧೆಯನ್ನೂ ತರುವಾಯ ಆಕಾಶ, ವಾಯು. ಜ್ಯೋತಿ, ನೀರು, ಪೃಥ್ವಿ, ಇಂದ್ರಿಯ, ಮನಸ್ಸು ಅನ್ನವನ್ನೂ, ಅನ್ನದಿಂದ ವೀರ್ಯ, ತಪಸ್ಸು, ಮಂತ್ರಗಳು, ಕರ್ಮಲೋಕಗಳು, ಇವುಗಳನ್ನು. ಕರ್ಮಲೋಕದಿಂದ ಪ್ರಪಂಚದಲ್ಲಿ ಪ್ರಖ್ಯಾತಿ ಈ ರೀತಿಯಾಗಿ ಪ್ರಾಣದಿಂದ ಎಲ್ಲವೂ ಸೃಷ್ಟಿಯಾಯಿತು.

**ಸ ಯಥೇಮಾ ನದ್ಯಃ ಸ್ಯಂದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛಂತಿ ಭಿದ್ಯೇತೇ ತಾಸಾಂ ನಾಮರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ । ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಷಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ**

**ಗಚ್ಛತಿ, ಭಿದ್ಯತೇ ಚಾಸಾಂ, ನಾಮರೂಪೇ, ಪುರುಷ ಇತ್ಯೇವಂ ಪ್ರೋಚ್ಯತೇ ; ಸ ಏಷೋಽಕಲೋಽಮೃತೋ ಭವತಿ ; ತದೇಷ ಶ್ಲೋಕಃ ||೫||**

ಈ ವಿಷಯದಲ್ಲಿ ಈ ದೃಷ್ಟಾಂತವಿದೆ: ಸಮುದ್ರಾಭಿಮುಖವಾಗಿ ಹರಿಯುತ್ತಿರುವ ನದಿಗಳು ಸಮುದ್ರವನ್ನು ಸೇರಿ ಹೇಗೆ ಅದೃಶ್ಯವಾಗುವವೋ, ಅವುಗಳ ನಾಮ ರೂಪಗಳನ್ನು ಹೇಗೆ ಕಳೆದುಕೊಂಡು ಅವು ಸಮುದ್ರವೆಂದೇ ಹೇಗೆ ಹೇಳಲ್ಪಡುವುವೋ ಹಾಗೆಯೇ ಈ ಸರ್ವಸಾಕ್ಷಿಯಾದ ಪುರುಷನನ್ನು ಹೊಂದಬೇಕಾಗಿರುವ ಈ ಹದಿನಾರು ಕಲೆಗಳು ಪುರುಷನನ್ನು ಹೊಂದಿ ವಿಲೀನಗೊಳ್ಳುವುವು. ಇವುಗಳ ನಾಮ ರೂಪಗಳೂ ಅಳಿಸಿಹೋಗುವುವು ಮತ್ತು ಇವೆಲ್ಲವೂ ಪುರುಷನೆಂದೇ ಹೇಳಲ್ಪಡುತ್ತದೆ. ಆ ಇವನು ಕಲಾಶೂನ್ಯನೂ, ಅಮೃತನೂ ಆಗುತ್ತಾನೆ. ಈ ವಿಷಯದಲ್ಲಿ ಈ ಮಂತ್ರವಿದೆ.

**ಅರಾ ಇವ ರಥನಾಭೌ । ಕಲಾ ಯಸ್ಮಿನ್ ಪ್ರತಿಷ್ಠಿತಾಃ । ತಂ ವೇದ್ಯಂ ಪುರುಷಂ ವೇದ । ಯಥಾ ಮಾವೋ ಮೃತ್ಯುಃ ಪರಿವ್ಯಥಾ ಇತಿ ||೬||**

ಯಾವ ರೀತಿ ರಥದ ಚಕ್ರದಲ್ಲಿ ಅರೇಕಾಲುಗಳು ಗುಂಬದಲ್ಲಿ ಸೇರಿಕೊಂಡಿರುತ್ತವೆಯೋ ಹಾಗೆ ಆ ಪರಮಾತ್ಮನಲ್ಲಿ ಎಲ್ಲಾ ಕಲೆಗಳೂ ಸೇರಿಕೊಂಡಿವೆ. ಅವನನ್ನೇ ವೇದಪುರುಷನೆಂದು ತಿಳಿ. ಆಗ ನಿನ್ನ ಸಮಸ್ತ ವ್ಯಥೆಗಳೂ ಮತ್ತು ಮೃತ್ಯುವೂ ನಿನ್ನಿಂದ ದೂರವಾಗುತ್ತವೆ.

**ತಾನ್ ಹೋವಾಚೈತಾವದೇವಾಹಮೇತತ್ ಪರ ಬ್ರಹ್ಮವೇದ। ನಾತಃ ಪರಮಸ್ತೀತಿ ||೭||**

ಪಿಪ್ಪಲಾದರು ಭರದ್ವಾಜರಿಗೆ ಹೇಳಿದರು " ಈ ಪರಬ್ರಹ್ಮವನ್ನು ನಾನು ಇಷ್ಟೇ ಅರಿತಿರುವೆನು. ಈ ಪರಬ್ರಹ್ಮಕ್ಕಿಂತ ಶ್ರೇಷ್ಠವಾದುದು ಯಾವುದೂ ಇಲ್ಲ.

ತೇ ತಮರ್ಚಯಂತಸ್ತ್ವಂ ಹಿ ನಃ ಪಿತಾ ಯೋಽಸ್ಮಾಕಮವಿದ್ಯಾಯಾಃ ಪರಂ ಪಾರಂ ತಾರಯಸೀತಿ । ನಮಃ ಪರಮಋಷಿಭ್ಯೋ ನಮಃ ಪರಮಋಷಿಭ್ಯಃ ॥೮॥

ಅನಂತರ ಪಿಪ್ಪಲಾದರಿಂದ ಉಪದೇಶಿಸಲ್ಪಟ್ಟ ಆ ಶಿಷ್ಯರು ಅವರನ್ನು ಪೂಜಿಸಿ ಹೇಳಿದರು, “ನಮ್ಮ ಅವಿದ್ಯೆ ಎಂಬ ಮಹಾಸಮುದ್ರದಿಂದ ಆಚೆಯ ದಡಕ್ಕೆ ದಾಟಿಸುವ ನೀವೇ ನಮ್ಮ ತಂದೆ.” ಪರಮಋಷಿಗಳಿಗೆ ನಮಸ್ಕಾರ. ಪರಮಋಷಿಗಳಿಗೆ ನಮಸ್ಕಾರ.

— — —

# ಐತರೇಯೋಪನಿಷತ್

ಪ್ರಥಮೋಧ್ಯಾಯಃ—ಪ್ರಥಮ ಖಂಡಃ

**ಹರಿಃ ಓಂ। ಆತ್ಮಾ ವಾ ಇದಮೇಕ ಏವಾಗ್ರ ಆಸೀತ್। ನಾನ್ಯತ್ ಕಿಂಚನ ಮಿಷತ್। ಸ ಈಕ್ಷತ ಲೋಕಾನ್ನು ಸೃಜಾ ಇತಿ ॥೧॥**

ಹರಿಃ ಓಂ. ಪ್ರಾರಂಭದಲ್ಲಿ ಆತ್ಮವು ಒಂದೇ ಇದ್ದು ವಿಶ್ವವೆಲ್ಲ ಆತ್ಮನೇ ಆಗಿತ್ತು. ಬೇರೆ ಏನೂ ಇರಲಿಲ್ಲ. ಆಗ ಆತ್ಮವು "ನನ್ನಿಂದ ನನಗಾಗಿ ಪ್ರಪಂಚವನ್ನು ಸೃಷ್ಟಿಸುತ್ತೇನೆ" ಎಂದುಕೊಂಡಿತು.

**ಸ ಇಮಾಂ ಲೋಕಾನಸೃಜತ। ಅಂಭೋ ಮರೀಚೀರ್ಮರಮಾಪೋಽದೋಽಂಭಃ ಪರೇಣ ದಿವಂ, ದ್ಯೌಃ ಪ್ರತಿಷ್ಠಾಽಂತರಿಕ್ಷಂ ಮರೀಚಯಃ। ಪೃಥಿವೀ ಮರೋ, ಯಾ ಅಧಸ್ತಾತ್ತಾ ಆಪಃ ॥೨॥**

ಹಾಗೆ ಸೃಷ್ಟಿಸಿದ ಪ್ರಪಂಚಗಳೆಂದರೆ—ದೇವಗಂಗೆಯಾದ ಅಂಬ, ಜ್ಯೋತಿಸ್ವರೂಪನಾದ ಮರೀಚಿ, ಲಯ ಮತ್ತು ಅಂತ್ಯಕಾರಣನಾದ ಮಾರ, ಪಾತಾಳಗಂಗೆಯಾದ ಜಲ. ಆಕಾಶದಮೇಲೆ ದೇವಗಂಗೆಯು ನೆಲಸಿದ್ದು ಆಕಾಶವನ್ನೇ ಆಶ್ರಯಸ್ಥಾನವಾಗಿ ಮಾಡಿಕೊಂಡಿತು. ಬೆಳಕು ಪ್ರಪಂಚದ ಎಲ್ಲ ಪ್ರದೇಶಗಳನ್ನೂ ಆಕ್ರಮಿಸಿಕೊಂಡಿತು. ಭೂಮಿಯು ಪ್ರಪಂಚದ ನಶ್ವರ ಭಾಗವಾಯಿತು, ಭೂಮಿಯ ಕೆಳಗೆ ಜಲವು ಆಶ್ರಯಹೊಂದಿತು.

**ಸ ಈಕ್ಷತೇಮೇ ನು ಲೋಕಾ ಲೋಕಪಾಲಕಾನ್ನು ಸೃಜಾ ಇತಿ। ಸೋಽದ್ಭ್ಯ ಏವ ಪುರುಷಂ ಸಮುದ್ಧೃತ್ಯಾಮೂರ್ಛಯತ್ ॥೩॥**

ಆತ್ಮವು ಆಲೋಚಿಸಿತು "ಈ ಪ್ರಪಂಚಗಳನ್ನು ಸೃಷ್ಟಿಸಿದ್ದಾಯಿತು. ಇನ್ನು ಈ ಲೋಕಗಳ ಪಾಲಕರನ್ನು ಸೃಜಿಸುತ್ತೇನೆ" ಎಂದುಕೊಂಡು ಜಲದಿಂದ ಪುರುಷನನ್ನು ಈಚೆಗೆ ತಂದು ಅವನಿಗೆ ಆಕಾರ ಮತ್ತು ಅನುಷ್ಠಾನಗಳನ್ನೊದಗಿಸಿತು,

**ತಮಭ್ಯತಪತ್, ತಸ್ಮಾಭಿತಪ್ತಸ್ಯ ಮುಖಂ ನಿರಭಿದ್ಯತ ಯಥಾಂಡಂ। ಮುಖಾದ್ವಾಗ್ವಾಚೋಽಗ್ನಿರ್ನಾಸಿಕೇ ನಿರಭಿದ್ಯೇತಾಂ, ನಾಸಿಕಾಭ್ಯಾಂ ಪ್ರಾಣಃ, ಪ್ರಾಣಾದ್ವಾಯುರಕ್ಷಿಣೀ ನಿರಭಿದ್ಯೇತಾಂ, ಅಕ್ಷೀಭ್ಯಾಂ ಚಕ್ಷುಶ್ಚಕ್ಷುಷ ಆದಿತ್ಯಃ, ಕರ್ಣೌ ನಿರಭಿದ್ಯೇತಾಂ, ಕರ್ಣಾಭ್ಯಾಂ ಶ್ರೋತ್ರಂ, ಶ್ರೋತ್ರಾದ್ದಿಶಸ್ತ್ವಗ್ಂ ನಿರಭಿದ್ಯೇತ, ತ್ವಚೋ ಲೋಮಾನಿ, ಲೋಮಭ್ಯ ಓಷಧಿ ವನಸ್ಪತಯೋ, ಹೃದಯಂ ನಿರಭಿದ್ಯತ, ಹೃದಯಾನ್ಮನೋ, ಮನಶ್ಚಂದ್ರಮಾ, ನಾಭಿರ್ನಿರಭಿದ್ಯತ, ನಾಭ್ಯಾ ಅಪಾನೋಽಪಾನಾನ್ಮೃತ್ಯುಃ, ಶಿಶ್ನಂ ನಿರಭಿದ್ಯತ, ಶಿಶ್ನಾದ್ರೇತೋ ರೇತಸ ಆಪಃ ॥೪॥**

ಪ್ರಾಣವು ಆತ್ಮನಮೇಲೆ ಕುಳಿತು ಕಾವನ್ನು ಕೊಟ್ಟಿತು. ಆ ಕಾವಿನಿಂದ ಮುಖವು ಹೊರಬಂದಿತು. ಯಾವರೀತಿ ಮೊಟ್ಟೆಯೊಡೆದು ಮರಿಯು ಹೊರಬರುತ್ತದೆಯೋ ಹಾಗೆ. ಮುಖದಿಂದ ವಾಕ್ಕೂ ವಾಕ್ಕಿನಿಂದ ಅಗ್ನಿಯೂ ಜನಿಸಿದವು. ತರುವಾಯ ಮೂಗು ಹೊರಬಂದಿತು. ಮೂಗಿನಿಂದ ಉಸಿರು ಮತ್ತು ಪ್ರಾಣವಾಯುವು ಜನಿಸಿತು. ತರುವಾಯ ಕಣ್ಣುಗಳು ಹೊರಬಂದವು, ಕಣ್ಣುಗಳಿಂದ ನೋಟವೂ, ನೋಟದಿಂದ ಸೂರ್ಯನೂ ಜನಿಸಿದರು. ತರುವಾಯ ಕಿವಿಗಳು ಹೊರಬಂದವು, ಕಿವಿಗಳಿಂದ ಶಬ್ದವೂ ಶಬ್ದದಿಂದ ದಿಕ್ಕುಗಳೂ ಜನಿಸಿದವು. ತರುವಾಯ ಚರ್ಮವು ಹೊರಬಂದಿತು, ಚರ್ಮದಿಂದ ರೋಮಗಳೂ, ರೋಮದಿಂದ ಔಷಧಿ ವನಸ್ಪತಿಗಳು ಜನಿಸಿದುವು. ತರುವಾಯ ಹೃದಯವು ಹೊರಬಂದಿತು, ಹೃದಯದಿಂದ ಮನಸ್ಸು, ಮನಸ್ಸಿನಿಂದ ಚಂದ್ರನೂ ಜನಿಸಿದರು. ತರುವಾಯ ನಾಭಿಯು ಹೊರಬಂದಿತು, ನಾಭಿಯಿಂದ ಅಪಾನವೂ, ಅಪಾನದಿಂದ ಮೃತ್ಯುವೂ ಜನಿಸಿದರು. ತರು

ಪಾಯು ಜನನೇಂದ್ರಿಯುಗಳು ಹೊರಬಂದವು. ಜನನೇಂದ್ರಿಯುಗಳಿಂದ ರೇತಸ್ಸೂ, ರೇತಸ್ಸಿನಿಂದ ಜಲವೂ ಜನಿಸಿದುವು.

ದ್ವಿತೀಯಃಖಂಡಃ

**ತಾ ಏತಾ ದೇವತಾಃ ಸೃಷ್ಟಾ ಅಸ್ಮಿನ್ ಮಹತ್ಯರ್ಣವೇ ಪ್ರಾಪತನ್ । ತಮಶನಾಪಿಪಾಸಾಭ್ಯಾಮನ್ವವಾರ್ಜತ್ । ತಾ ಏನ ಮಬ್ರುವನ್ನಾಯತನಂ ನಃ ಪ್ರಜಾನೀಹಿ ಯಸ್ಮಿನ್ ಪ್ರತಿಷ್ಠಿತಾ ಅನ್ನಮದಾಮೇತಿ ॥೧॥**

ಹೀಗೆ ಸೃಷ್ಟಿಸಲ್ಪಟ್ಟ ಆ ದೇವತೆಗಳು ಕೂಡಲೇ ಸಾಗರದಲ್ಲಿ ಬಿದ್ದವು. ಹಸಿವು ಬಾಯಾರಿಕೆಗಳು ಅವರನ್ನು ಆವರಿಸಿದುವು. ಆಗ ಅವು ಪರಮಾತ್ಮ ನಿಗೆ ಹೇಳಿದುವು " ಸ್ವಾಮಿ ನಮಗೆ ವಾಸಸ್ಥಾನವನ್ನು ತೋರಿಸಿರಿ ಮತ್ತು ಸ್ವಸ್ಥವಾಗಿದ್ದು ಆಹಾರವನ್ನು ಸೇವಿಸುವಂತೆ ಮಾಡಿರಿ " ಎಂದುವು.

**ತಾಭ್ಯೋಗಾಮಾನಯತ್ ; ತಾ ಅಬ್ರುವನ್ ನ ವೈ ನೋಽಯಮಲಮಿತಿ । ತಾಭ್ಯೋಽಶ್ವಮಾನಯತ್ ; ತಾ ಅಬ್ರುವನ್ ನ ವೈ ನೋಽಯಮಲಮಿತಿ ॥೨॥**

ಆಗ ಪರಮಾತ್ಮನು ಅವರಿಗೆ ಒಂದು ಪಸುವನ್ನು ಸೃಷ್ಟಿಸಿದನು. ಆದರೆ ಅದು ತಮಗೆ ಸಾಲದೆಂದು ಅವರು ತಿಳಿಸಿದರು. ಮತ್ತೆ ಪರ ಮಾತ್ಮನು ಒಂದು ಕುದುರೆಯನ್ನು ಸೃಷ್ಟಿಸಿದನು. ಅವರು ಆಗಲೂ ಅದು ತಮಗೆ ಸಾಲದೆಂದರು.

**ತಾಭ್ಯಃ ಪುರುಷಮಾನಯತ್ ; ತಾ ಅಬ್ರುವನ್ ಸುಕೃತಂ ಬತೇತಿ । ಪುರುಷೋ ವಾವ ಸುಕೃತಂ । ತಾ ಅಬ್ರವೀದ್ಯಥಾ- ಯತನಂ ಪ್ರವಿಶತೇತಿ ॥೩॥**

ಆಗ ಪರಮಾತ್ಮನು ಅವರಿಗೆ ಒಬ್ಬ ಪುರುಷನನ್ನು ಸೃಷ್ಟಿಸಿದನು. ಆಗ ಅವರು ಹೇಳಿದರು "ಒಳ್ಳೆಯ ಆಕಾರವಾಗಿದೆ. ನಿಜವಾಗಿಯೂ ಪುರುಷನೇ ಮೇಲು, ಅಲಂಕಾರವಾಗಿದ್ದಾನೆ" ಎಂದರು. ಆಗ ಪರಮಾತ್ಮನು ಆ ದೇವತೆಗಳಿಗೆ ತಮ್ಮ ತಮ್ಮ ನಿವಾಸಗಳನ್ನು ಆ ಪುರುಷನಲ್ಲಿ ಹುಡುಕಿಕೊಂಡು ಸೇರಿಕೊಳ್ಳಲು ಅನುಜ್ಞೆಯಿತ್ತನು.

ಅಗ್ನಿರ್ವಾಗ್ಭೂತ್ವಾ ಮುಖಂ ಪ್ರಾವಿಶದ್ವಾಯುಃ ಪ್ರಾಣೋ ಭೂತ್ವಾ ನಾಸಿಕೇ ಪ್ರಾವಿಶದಾದಿತ್ಯಶ್ಚಕ್ಷುರ್ಭೂತ್ವಾಽಕ್ಷಿಣೀ ಪ್ರಾವಿಶದ್ದಿಶಃ ಶ್ರೋತ್ರಂ ಭೂತ್ವಾ ಕರ್ಣೌ ಪ್ರಾವಿಶನ್ನೋಷಧಿವನಸ್ಪತಯೋ ಲೋಮಾನಿ ಭೂತ್ವಾ ತ್ವಚಂ ಪ್ರಾವಿಶಂಶ್ಚಂದ್ರಮಾ ಮನೋ ಭೂತ್ವಾ ಹೃದಯಂ ಪ್ರಾವಿಶನ್ಮೃತ್ಯುರಪಾನೋ ಭೂತ್ವಾ ನಾಭಿಂ ಪ್ರಾವಿಶದಾಪೋ ರೇತೋ ಭೂತ್ವಾ ಶಿಶ್ನಂ ಪ್ರಾವಿಶನ್ ||೪||

ಅಗ್ನಿಯು ವಾಗಿಂದ್ರಿಯವಾಗಿ ಬಾಯನ್ನು ಸೇರಿತು, ವಾಯುವು ಘ್ರಾಣೇಂದ್ರಿಯವಾಗಿ ಮೂಗನ್ನು ಸೇರಿತು. ಸೂರ್ಯನು ಚಕ್ಷುರಿಂದ್ರಿಯವಾಗಿ ಕಣ್ಣುಗಳನ್ನು ಸೇರಿದನು. ದಿಕ್ಕುಗಳು ಶ್ರೋತ್ರೇಂದ್ರಿಯವಾಗಿ ಕಿವಿಗಳನ್ನು ಸೇರಿದವು, ಓಷಧಿ ವನಸ್ಪತಿಗಳು ಕೂದಲುಗಳಿಂದ ಕೂಡಿದ ತ್ವಗಿಂದ್ರಿಯವಾಗಿ ಚರ್ಮವನ್ನು ಸೇರಿದುವು. ಚಂದ್ರನು ಮನಸ್ಸಾಗಿ ಹೃದಯವನ್ನು ಸೇರಿದನು. ಮೃತ್ಯುವು ಅಪಾನವಾಗಿ ನಾಭಿಯನ್ನು ಸೇರಿದನು. ಜಲವು ರೇತಸ್ಸಾಗಿ ಶಿಶ್ನವನ್ನು ಸೇರಿದುವು,

ತಮಶನಾಯಾಪಿಪಾಸೇ ಅಬ್ರೂತಾಂ — ಆವಾಭ್ಯಾಮಭಿಪ್ರಜಾನೀಹೀತಿ। ತೇ ಅಬ್ರವೀದೇತಾಸ್ವೇವ ವಾಂ ದೇವತಾಸ್ವಾಭಜಾಮ್ಯೇತಾಸು ಭಾಗಿನ್ಯೌ ಕರೋಮೀತಿ। ತಸ್ಮಾದ್ಯಸ್ಯೈ ಕಸ್ಯೈ ಚ ದೇವತಾಯೈ ಹವಿರ್ಗೃಹ್ಯತೇ ಭಾಗಿನ್ಯಾವೇವಾಸ್ಯಾಮಶನಾಯಾಪಿಪಾಸೇ ಭವತಃ ||೫||

ಹೀಗೆ ಸೇರಿಕೊಂಡ ತರುವಾಯ ಹಸಿವು ಬಾಯಾರಿಕೆಗಳು ಪರಮಾತ್ಮನನ್ನು ಕುರಿತು ತಮಗೂ ವಸತಿಗಳನ್ನು ಅನುಜ್ಞೆಮಾಡಲು ಕೇಳಿದುವು. ಆಗ ಪರಮಾತ್ಮನು ಅವುಗಳನ್ನು ಕುರಿತು "ನಿಮ್ಮ ನಿಮ್ಮನ್ನು ಈ ದೇವತೆಗಳಲ್ಲಿಯೇ ಸೇರಿಸುತ್ತೇನೆ, ಇವರಲ್ಲಿ ಭಾಗಿಗಳಾಗಿ ಮಾಡುತ್ತೇನೆ" ಎಂದನು. ಆದುದರಿಂದಲೇ ಯಾವ ದೇವತೆಗೆ ಹವಿಸ್ಸನ್ನು ಕೊಡಲು ತೆಗೆದುಕೊಂಡರೂ ಆ ದೇವತೆಯಲ್ಲಿ ಹಸಿವು ಬಾಯಾರಿಕೆಗಳು ಭಾಗಿಗಳಾಗಿಯೇ ಇರುತ್ತವೆ.

## ತೃತೀಯ ಖಂಡಃ

**ಸ ಈಕ್ಷತೇಮೇನು ಲೋಕಾಶ್ಚ ಲೋಕಪಾಲಾಶ್ಚಾನ್ನಮೇಭ್ಯಃ ಸೃಜಾ ಇತಿ ॥೧॥**

ಆಗ ಪರಮಾತ್ಮನು ತಾನು ಲೋಕಗಳನ್ನೂ ಅವರ ಪಾಲಕರನ್ನೂ ಸೃಷ್ಟಿಸಿ ಆಯಿತೆಂದೂ, ಇವರುಗಳಿಗೆ ನನ್ನಿಂದಲೇ ಅನ್ನವನ್ನೂ ಸೃಷ್ಟಿಸುವೆನೆಂದೂ ಯೋಚಿಸಿದನು.

**ಸೋಽಪೋಽಭ್ಯತಪತ್ ; ತಾಭ್ಯೋಽಭಿತಪ್ತಾಭ್ಯೋ ಮೂರ್ತಿರಜಾಯತ । ಯಾ ವೈ ಸಾ ಮೂರ್ತಿರಜಾಯತಾನ್ನಂ ವೈತತ್ ॥೨॥**

ಪರಮಾತ್ಮನು ತನ್ನ ಸರ್ವಶಕ್ತಿಯನ್ನೂ ಉಪಯೋಗಿಸಿ ಜಲದಮೇಲೆ ಕಾವನ್ನು ಕೊಟ್ಟನು. ಮೇಲೆ ಮೇಲೆ ಕಾವನ್ನು ಕೊಡುತ್ತ ಹೋಗಲು ಒಂದು ಆಕಾರವು ಹುಟ್ಟಿತು. ಹಾಗೆ ಹುಟ್ಟಿದ ಆಕಾರವೇ ಅನ್ನವೆಂದಾಯಿತು.

**ತದೇತಭಿಸೃಷ್ಟಂ ಪರಾಂಗ್ತ್ಯಜಿಘಾಂಸತ್ । ತದ್ವಾಚಾಽಜಿಘೃಕ್ಷತ್, ತನ್ನಾಶಕ್ನೋದ್ವಾಚಾ ಗ್ರಹೀತುಂ । ಸ ಯದ್ಧೈನದ್ವಾಚಾಽಗ್ರಹೈಷ್ಯದಭಿವ್ಯಾಹೃತ್ಯ ಹೈವಾನ್ನಮತ್ರಪ್ಸ್ಯತ್ ॥೩॥**

ಅನ್ನವನ್ನು ಸ್ಪರ್ಶಿಸುತ್ತಲೇ ಅದು ಅವನ ಹಿಡಿತದಿಂದ ತಪ್ಪಿಸಿಕೊಂಡು ಹೋಯಿತು. ಅದನ್ನು ವಾಕ್ಕಿನಿಂದ ಹಿಡಿದುಕೊಳ್ಳಲು ಯತ್ನಿಸಿದನು. ಆದರೆ ಆಗಲಿಲ್ಲ. ಹಾಗೇನಾದರೂ ವಾಕ್ಕಿನಿಂದ ಅದನ್ನು ಹಿಡಿದುಕೊಂಡಿದ್ದರೆ ಮನುಷ್ಯನು ಅನ್ನವನ್ನು ಉಚ್ಚರಿಸಿಯೇ ತೃಪ್ತಿಪಡಬೇಕಾಗುತ್ತಿತ್ತು.

**ತತ್ ಪ್ರಾಣೇನಾಜಿಘೃಕ್ಷತ್, ತನ್ನಾಶಕ್ನೋತ್ ಪ್ರಾಣೇನ ಗ್ರಹೀತುಂ । ಸ ಯದ್ಧೈನತ್ ಪ್ರಾಣೇನಾಗ್ರಹೈಷ್ಯದಭಿಪ್ರಾಣ್ಯ ಹೈವಾನ್ನಮನ್ನಮತ್ರಪ್ಸ್ಯತ್ ॥೪॥**

ಆಗ ಪರಮಾತ್ಮನು ಅದನ್ನು ಘ್ರಾಣೇಂದ್ರಿಯದಿಂದ ಹಿಡಿದುಕೊಳ್ಳಲು ಯತ್ನಿಸಿದನು. ಆದರೆ ಅದನ್ನು ಘ್ರಾಣೇಂದ್ರಿಯದಿಂದ ಹಿಡಿದುಕೊಳ್ಳಲಾಗಲಿಲ್ಲ. ಹಾಗೇನಾದರೂ ಅವನು ಅನ್ನವನ್ನು ಘ್ರಾಣೇಂದ್ರಿಯದಿಂದ ಹಿಡಿದುಕೊಂಡಿದ್ದಲ್ಲಿ ಜನರು ಅನ್ನವನ್ನು ಆಘ್ರಾಣಿಸಿಯೇ ತೃಪ್ತರಾಗಬೇಕಾಗಿತ್ತು.

**ತಚ್ಚಕ್ಷುಷಾಽಜಿಘೃಕ್ಷತ್, ತನ್ನಾಶಕ್ನೋಚ್ಚಕ್ಷುಷಾ ಗ್ರಹೀತುಮ್ । ಸ ಯದ್ಧೈನಚ್ಚಕ್ಷುಷಾಽಗ್ರಹೈಷ್ಯದ್ದೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥೫॥**

ಆಗ ಅನ್ನವನ್ನು ಪುನಃ ದೃಷ್ಟಿಯಿಂದ ಹಿಡಿಯಲೆತ್ನಿಸಿದನು. ಅದನ್ನು ದೃಷ್ಟಿಯಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಹಾಗೇನಾದರೂ ಅವನು ಅದನ್ನು ದೃಷ್ಟಿಯಿಂದ ಹಿಡಿದುಕೊಂಡಿದ್ದರೆ ಜನರು ಅನ್ನವನ್ನು ನೋಡಿಯೇ ತೃಪ್ತಿಪಡಬೇಕಾಗುತ್ತಿತ್ತು.

**ತಚ್ಛ್ರೋತ್ರೇಣಾಜಿಘೃಕ್ಷತ್, ತನ್ನಾಶಕ್ನೋಚ್ಛ್ರೋತ್ರೇಣ ಗ್ರಹೀತುಂ । ಸ ಯದ್ಧೈನಚ್ಛ್ರೋತ್ರೇಣಾಗ್ರಹೈಷ್ಯಚ್ಛ್ರುತ್ವಾ ಹೈವಾನ್ನಮತ್ರಪ್ಸ್ಯತ್ ॥೬॥**

ಆಗ ಅವನು ಅನ್ನವನ್ನು ಶ್ರವಣೇಂದ್ರಿಯದಿಂದ ಹಿಡಿಯಲೆತ್ನಿಸಿದನು. ಅದನ್ನು ಶ್ರವಣೇಂದ್ರಿಯದಿಂದ ಹಿಡಿಯಲಾಗಲಿಲ್ಲ. ಅವನು ಅದನ್ನು ಶ್ರವ

ಣೇಂದ್ರಿಯದಿಂದ ಹಿಡಿದುಕೊಂಡಿದ್ದಿದ್ದರೆ ಜನರು ಅನ್ನವನ್ನು ಕೇಳಿಯೇ ತೃಪ್ತರಾಗಬಹುದಾಗಿತ್ತು.

**ತತ್ ತ್ವಚಾಽಜಿಘೃಕ್ಷತ್, ತನ್ನಾಶಕ್ನೋತ್ ತ್ವಚಾಗ್ರಹೀತುಂ । ಸ ಯದ್ಧೈನತ್ ತ್ವಚಾ ಗ್ರಹೈಷ್ಯತ್ ಸ್ಪೃಷ್ಟ್ವಾ ಹೈವಾನ್ನಮತ್ರಪ್ಸ್ಯತ್ ॥೭॥**

ಆಗ ಅವನು ಅನ್ನವನ್ನು ಸ್ಪರ್ಶೇಂದ್ರಿಯದ ಮೂಲಕ ಹಿಡಿಯಲೆತ್ನಿಸಿದನು. ಆದರೆ ಅದನ್ನು ಸ್ಪರ್ಶೇಂದ್ರಿಯದ ಮೂಲಕ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಹಾಗೇನಾದರೂ ಅವನು ಸ್ಪರ್ಶೇಂದ್ರಿಯದ ಮೂಲಕ ಹಿಡಿದುಕೊಂಡಿದ್ದರೆ ಜನರು ಅನ್ನವನ್ನು ಸ್ಪರ್ಶಿಸಿಯೇ ತೃಪ್ತಿಪಡಬಹುದಾಗುತ್ತಿತ್ತು.

**ತನ್ಮನಸಾಽಜಿಘೃಕ್ಷತ್, ತನ್ನಾಶಕ್ನೋನ್ಮನಸಾ ಗ್ರಹೀತುಂ । ಸ ಯದ್ಧೈನನ್ಮನಸಾಽಗ್ರಹೈಷ್ಯದ್ಧ್ಯಾತ್ವಾ ಹೈವಾನ್ನಮತ್ರಪ್ಸ್ಯತ್ ॥೮॥**

ಅವನು ಅದನ್ನು ಮನಸ್ಸಿನಿಂದ ಹಿಡಿದುಕೊಳ್ಳಲು ಪ್ರಯತ್ನಿಸಿದನು. ಆದರೆ ಅನ್ನವನ್ನು ಮನಸ್ಸಿನಿಂದ ಹಿಡಿದುಕೊಳ್ಳಲು ಶಕ್ತನಾಗಲಿಲ್ಲ ಹಾಗೇನಾದರೂ ಮನಸ್ಸಿನಿಂದ ಅದನ್ನು ಹಿಡಿದುಕೊಂಡಿದ್ದರೆ ಜನರು ಅನ್ನವನ್ನು ಯೋಚಿಸಿಯೇ ತೃಪ್ತರಾಗಬಹುದಾಗಿತ್ತು.

**ತಚ್ಛಿಶ್ನೇನಾಜಿಘೃಕ್ಷತ್, ತನ್ನಾಶಕ್ನೋಚ್ಛಿಶ್ನೇನ ಗ್ರಹೀತುಂ । ಸ ಯದ್ಧೈನಚ್ಛಿಶ್ನೇನಾಗ್ರಹೈಷ್ಯದ್ವಿಸೃಜ್ಯ ಹೈವಾನ್ನಮತ್ರಪ್ಸ್ಯತ್ ॥೯॥**

ಅವನು ಅದನ್ನು ಶಿಶ್ನದಿಂದ ಹಿಡಿಯಲೆತ್ನಿಸಿದನು ಆದರೆ ಶಿಶ್ನದಿಂದ ಅದನ್ನು ಹಿಡಿದುಕೊಳ್ಳಲು ಶಕ್ತನಾಗಲಿಲ್ಲ. ಅವನು ಅದನ್ನು ಹಾಗೇನಾದರೂ ಶಿಶ್ನದಿಂದ ಹಿಡಿದುಕೊಂಡಿದ್ದರೆ ಜನರು ಅನ್ನವನ್ನು ವಿಸರ್ಜಿಸುವುದರಿಂದ ತೃಪ್ತರಾಗಬಹುದಾಗಿತ್ತು.

ತದಪಾನೇನಾಜಿಘೃಕ್ಷತ್, ತದಾವಯತ್ । ಸೈಷೋಽನ್ನಸ್ಯ ಗ್ರಹೋಯದ್ವಾಯುರನ್ನಾಯುರ್ವಾ ಏಷಯದ್ವಾಯುಃ ॥೧೦॥

ಆಗ ವಿರಾಟ್‌ಪುರುಷನು ಅನ್ನವನ್ನು ಅಪಾನವಾಯುವಿನ ಮೂಲಕ ಹಿಡಿಯಲೆತ್ನಿಸಿದನು ಮತ್ತು ಹಿಡಿದುಕೊಂಡನು ಈ ರೀತಿ ಅನ್ನವನ್ನು ಹಿಡಿದುಕೊಂಡವನೂ ಪ್ರಾಣನಾಗಿದ್ದುದರಿಂದ ಸಮಸ್ತ ವಾಯುಗಳೂ ತಮ್ಮ ಪ್ರಾಣವನ್ನು ಅನ್ನದಿಂದಲೇ ಉಳಿಸಿಕೊಳ್ಳಬೇಕಾಯಿತು.

**ಸ ಈಕ್ಷತ ಕಥಂ ನ್ವಿದಂ ಮದೃತೇ ಸ್ಯಾದಿತಿ । ಸ ಈಕ್ಷತ ಕತರೇಣ ಪ್ರಪದ್ಯಾ ಇತಿ । ಸ ಈಕ್ಷತ ಯದಿ ವಾಚಾಽಭಿವ್ಯಾಹೃತಂ, ಯದಿ ಪ್ರಾಣೇನಾಭಿಪ್ರಾಣಿತಂ, ಯದಿ ಚಕ್ಷುಷಾದೃಷ್ಟಂ, ಯದಿ ಶ್ರೋತ್ರೇಣ ಶ್ರುತಂ, ಯದಿ ತ್ವಚಾಸ್ಪೃಷ್ಟಂ, ಯದಿ ಮನಸಾ ಧ್ಯಾತಂ, ಯದ್ಯಪಾನೇನಾಭ್ಯಪಾನಿತಂ, ಯದಿ ಶಿಶ್ನೇನ ವಿಸೃಷ್ಟ ಮಥ ಕೋಽಹಮಿತಿ ॥೧೧॥**

ಆಗ ಪ್ರಾಣನು ಯೋಚಿಸಿದನು. " ಇವೆಲ್ಲವೂ ನಾನಿಲ್ಲವೆ ಹೇಗೆತಾನೇ ಉಳಿದೀತು ? ಯಾವ ಮಾರ್ಗದಿಂದ ಅವನ್ನು ನಾನು ಪ್ರವೇಶಿಸಲಿ ? ಮಾತನಾಡುವುದು ವಾಕ್ಕಾಗಿದ್ದರೆ, ಉಸಿರಾಡುವುದು ಪ್ರಾಣವಾಗಿದ್ದರೆ, ನೋಟವು ಕಣ್ಣಿನಿಂದಾಗಿದ್ದರೆ, ಶಬ್ದವು ಕಿವಿಯಿಂದಲೇ ಆಗಿದ್ದರೆ, ಯೋಚನೆಯು ಮನಸ್ಸಿನಿಂದಾಗಿದ್ದರೆ, ಅಧೋಕಾರ್ಯಗಳು ಅಪಾನದಿಂದಾಗಿದ್ದರೆ, ಹೊರಬೀಳುವುದು ಶಿಶ್ನದಿಂದಾಗಿದ್ದರೆ ನಾನು ಯಾರು " ಎಂಬುದಾಗಿ ಯೋಚಿಸಿದನು

**ಸ ಏತಮೇವ ಸೀಮಾನಂ ವಿದಾರ್ಯೈತಯಾ ದ್ವಾರಾ ಪ್ರಾಪದ್ಯತ । ಸೈಷಾವಿದೃತಿರ್ನಾಮ ದ್ವಾಸ್ತದೇತನ್ನಾಂದನಂ । ತಸ್ಯ ತ್ರಯ ಅವಸಥಾಸ್ತ್ರಯಃ ಸ್ವಪ್ನಾಃ । ಅಯಮಾವಸಥೋಽಯಮಾವಸಥೋಽಯಮಾವಸಥ ಇತಿ ॥೧೨॥**

ಈ ಯೋಚನೆಯಲ್ಲಿದ್ದಾಗ ಅಲ್ಲಿ ಬಿರುಕುಬಿಟ್ಟಿತು. ಈ ಬಿರುಕನ್ನೇ ದ್ವಾರವನ್ನಾಗಿಸಿಕೊಂಡು ಅಲ್ಲಿಗೆ ಪ್ರವೇಶಿಸಿದನು. ಇದನ್ನೇ ವಿಚ್ಛಿದ್ರವಾದ

ದ್ವಾರಗಳೆಂದು ಕರೆಯಲಾಯಿತು. ಈ ದ್ವಾರವೇ ಅವನ ಬರುವಿಕೆಗೆ ಮಾರ್ಗವಾಯಿತು ಮತ್ತು ಇಲ್ಲಿಯೇ ಅವನ ಪ್ರಭಾವವನ್ನು ತೋರಿಸುವ ಸ್ಥಳವಾಯಿತು. ಅವನಿಗೆ ಆ ನಗರದಲ್ಲಿ ಮೂರು ಮಹಲುಗಳು ತಯಾರಾದುವು, ಮೂರು ಸ್ವಪ್ನಗಳೂ ಉಂಟಾದುವು. ಇದೊಂದು ವಾಸಸ್ಥಾನ, ಇದೊಂದು ವಾಸಸ್ಥಾನ ಇದೊಂದು ವಾಸಸ್ಥಾನ.

**ಸ ಜಾತೋ ಭೂತಾನ್ಯಭಿವ್ಯೈಖ್ಯತ್ ಕಿಮಿಹಾನ್ಯಂ ವಾವದಿಷದಿತಿ। ಸ ಏತಮೇವ ಪುರುಷಂ ಬ್ರಹ್ಮ ತತಮಪಶ್ಯದಿದಮದರ್ಶಮಿತೀ ॥೧೩॥**

ಅವನು ಹುಟ್ಟಿ ಪಂಚಭೂತಮಯವಾದ ಶರೀರಗಳನ್ನು ವ್ಯಕ್ತಪಡಿಸಿದನು. ಅವನು ಇನ್ನೇನನ್ನೂ ನೋಡಲಿಲ್ಲ, ಯಾರನ್ನು ಕುರಿತೂ ಮಾತನಾಡಲಿಲ್ಲ. ಅವನು ಈ ಪುರುಷನನ್ನೇ ಪರಿಪೂರ್ಣವಾದ ಬ್ರಹ್ಮನೆಂದು ಅರಿತುಕೊಂಡನು. ಅಹೋ ಇದನ್ನು ನೋಡಿದನು.

**ತಸ್ಮಾದಿದಂದ್ರೋ ನಾಮೇದಂದ್ರೋ ಹ ವೈ ನಾಮ। ತಮಿಂದ್ರಂ ಸಂತಮಿಂದ್ರ ಇತ್ಯಾಚಕ್ಷತೇ ಪರೋಕ್ಷೇಣ। ಪರೋಕ್ಷಪ್ರಿಯಾ ಇವ ಹಿ ದೇವಾಃ ಪರೋಕ್ಷಪ್ರಿಯಾ ಇವ ಹಿ ದೇವಾಃ ॥೧೪॥**

ಆದುದರಿಂದ ಇವನ ಹೆಸರು ಇದಂದ್ರ. ಇವನು ಇದಂದ್ರನೆಂದು ಪ್ರಸಿದ್ಧನಾದನು. ಇದಂದ್ರನಾದ ಅವನನ್ನು ಇಂದ್ರನೆಂದು ಪರೋಕ್ಷವಾಗಿ ಕರೆಯುತ್ತಾರೆ. ಏಕೆಂದರೆ ದೇವತೆಗಳು ಪರೋಕ್ಷಪ್ರಿಯರು. ದೇವತೆಗಳು ಪರೋಕ್ಷಪ್ರಿಯರು.

ಎರಡನೆಯ ಅಧ್ಯಾಯ— ಪ್ರಥಮ ಖಂಡಃ

**ಓಂ ಪುರುಷೇ ಹ ವಾ ಅಯಮಾದಿತೋ ಗರ್ಭೋ ಭವತಿ ಯದೇತದ್ರೇತಃ । ತದೇತತ್ ಸರ್ವೇಭ್ಯೋಽಂಗೇಭ್ಯಸ್ತೇಜಃ ಸಂಭೂತಮಾತ್ಮನ್ಯೇವಾತ್ಮಾನಂ ಬಿಭರ್ತಿ ; ತದ್ಯದಾ ಸ್ತ್ರಿಯಾಂ ಸಿಂಚತ್ಯಥೈನಜ್ಜನಯತಿ ; ತದಸ್ಯ ಪ್ರಥಮಂ ಜನ್ಮ ॥೧॥**

ಈ ಜೀವಾತ್ಮನು ಮೊದಲು ಪುರುಷನಲ್ಲಿ ರೇತೋರೂಪವಾದ ಗರ್ಭವಾಗುತ್ತಾನೆ, ಆ ಈ ರೇತಸ್ಸು ಸರ್ವಾಂಗಗಳಿಂದ ತೇಜಸ್ಸಾಗಿ ಉತ್ಪನ್ನವಾಗಿರುತ್ತದೆ. ರೇತೋರೂಪದಿಂದ ಗರ್ಭವಾಗಿರುವ ಆ ಆತ್ಮನನ್ನು ತನ್ನಲ್ಲಿಯೇ ಧರಿಸಿರುತ್ತಾನೆ. ಅದನ್ನು ಯಾವಾಗ ಸ್ತ್ರೀಯಲ್ಲಿ ಸೇಚನಮಾಡುತ್ತಾನೋ ಆಗ ಗರ್ಭೋತ್ಪತ್ತಿಯನ್ನು ಮಾಡುತ್ತಾನೆ. ಅದು ಅವನ ಮೊದಲನಯ ಜನ್ಮ,

**ತತ್ ಸ್ತ್ರಿಯಾ ಆತ್ಮಭೂಯಂ ಗಚ್ಛತಿ, ಯಥಾ ಸ್ವಮಂಗಂ ತಥಾ । ತಸ್ಮಾದೇನಾಂ ನ ಹಿನಸಿ ; ಸಾಽಸ್ಯೈತಮಾತ್ಮಾನಮತ್ರ ಗತಂ ಭಾವಯತಿ ॥೨॥**

ಇದು ಆ ಸ್ತ್ರೀಯ ಆತ್ಮಭೂತಿಯಾಗುಳಿಯುತ್ತದೆ. ಆಕೆಗೆ ಇದರಿಂದ ಯಾವ ಬಾಧೆಯೂ ಇರುವುದಿಲ್ಲ. ಬದಲಾಗಿ ಅವಳು ಇಲ್ಲಿ ಸೇರಿದ ಇವನ ಆತ್ಮವನ್ನು ಪಾಲಿಸುತ್ತಾಳೆ. ಅದು ಆಕೆಗೆ ಸಂತೋಷವನ್ನುಟುಮಾಡುತ್ತದೆ.

ಸಾ ಭಾವಯಿತ್ರೀ ಭಾವಯಿತವ್ಯಾ ಭವತಿ । ತಂ ಸ್ತ್ರೀಗರ್ಭಂ ಬಿಭರ್ತಿ ಸೋಽಗ್ರ ಏವ ಕುಮಾರಂ ಜನ್ಮನೋಽಗ್ರೇಽಧಿಭಾವಯತಿ । ಸ ಯತ್ ಕುಮಾರಂ ಜನ್ಮನೋಽಗ್ರೇಽಧಿಭಾವಯತ್ಯಾತ್ಮಾನಮೇವ ತದ್ಭಾವಯತ್ಯೇಷಾಂ ಲೋಕಾನಾಂ ಸಂತತ್ಯಾ ; ಏವಂ ಸಂತತಾ ಹೀಮೇ ಲೋಕಾಸ್ತದಸ್ಯ ದ್ವಿತೀಯಂ ಜನ್ಮ ॥೩॥

ತನ್ನ ಗರ್ಭವಾಗಿರುವ ತನ್ನ ಪತಿಯ ಆತ್ಮವನ್ನು ಪಾಲಿಸುತ್ತಿರುವ ಆಕೆಯು ಪತಿಯಿಂದ ಪಾಲಿಸಲ್ಪಡಲು ಅರ್ಹಳಾಗುತ್ತಾಳೆ. ಸ್ತ್ರೀಯು ಆ ಗರ್ಭವನ್ನು ಜನ್ಮಕ್ಕೆ ಮೊದಲೇ ಧರಿಸುತ್ತಾಳೆ. ತಂದೆಯು ಮೊದಲೇ ಹುಟ್ಟಿದಕೂಡಲೇ ಸಂತಾನವನ್ನು ಪಾಲಿಸುತ್ತಾನೆ. ಅವನು ಮೊದಲೇ ಹುಟ್ಟಿದಕೂಡಲೇ ಸಂತಾನವನ್ನು ಪಾಲಿಸುವುದರಿಂದ ಈ ಲೋಕಗಳ ಸಂತತಿ ಗೋಸ್ಕರ ತನ್ನನ್ನೇ ಪಾಲಿಸಿಕೊಳ್ಳುತ್ತಾನೆ. ಹೀಗೆ ಈ ಲೋಕಗಳು ಅವಿಚ್ಛಿನ್ನವಾಗಿರುತ್ತವೆ. ಅದು ಇವನ ಎರಡನೆಯ ಜನ್ಮ.

**ಸೋಽಸ್ಯಾಯಮಾತ್ಮಾ ಪುಣ್ಯೇಭ್ಯಃ ಕರ್ಮಭ್ಯಃ ಪ್ರತಿಧೀಯತೇ | ಅಥಾಸ್ಯಾಯಮಿತರ ಆತ್ಮಾ ಕೃತಕೃತ್ಯೋ ವಯೋಗತಃ ಪ್ರೈತಿ | ಸ ಇತಃ ಪ್ರಯನ್ನೇವ ಪುನರ್ಜಾಯತೇ, ತದಸ್ಯ ತೃತೀಯಂ ಜನ್ಮಃ ||೪||**

ಇದೇ ಮನುಷ್ಯನ ಪ್ರಾಣ ಮತ್ತು ಆತ್ಮನ ಕ್ರಿಯೆ. ಇದನ್ನು ಅವನು ತನ್ನ ಧರ್ಮಕಾರ್ಯವೆಂದು ಭಾವಿಸಿ ಉಪಸರ್ಗಹೊಂದುತ್ತಾನೆ. ಇದರಂತೆ ಇತರ ಆತ್ಮಗಳೂ ಅವರವರ ವಯಸ್ಸಾದಂತೆ ತಮ್ಮ ತಮ್ಮ ಕರ್ತವ್ಯಗಳು ಮುಗಿದಂತೆ ಎಲ್ಲೆಲ್ಲಿಗೆ ಹೋಗಬೇಕೋ ಅಲ್ಲಲ್ಲಿಗೆ ಹೋಗಿ ಸೇರಿಕೊಳ್ಳುತ್ತವೆ. ಮತ್ತು ಪುನರ್ಜನ್ಮಕ್ಕೆ ಸಿದ್ಧವಾಗುತ್ತವೆ. ಇದು ತೃತೀಯ ಜನನವೆಂದು ಮಹರ್ಷಿಗಳು ಹೇಳುತ್ತಾರೆ.

**ತದುಕ್ತಮೃಷಿಣಾ—**

**ಗರ್ಭೇ ನು ಸನ್ನನ್ವೇಷಾಮವೇದಮಹಂ ದೇವಾನಾಂ ಜನಿಮಾನಿ ವಿಶ್ವಾ | ಶತಂ ಮಾ ಪುರ ಆಯಸೀರ ರಕ್ಷನ್ನಧಃ ಶ್ಯೇನೋ ಜವಸಾ ನಿರದೀಯಮಿತಿ ಗರ್ಭ ಏವೈತಚ್ಛಯಾನೋ ವಾಮದೇವ ಏವಮುವಾಚ ||೫||**

ಇದು ಋಷಿಯಿಂದ ಹೇಳಲ್ಪಟ್ಟಿದೆ.

ನಾನು ಗರ್ಭದಲ್ಲಿದ್ದಾಗಲೇ ಈ ದೇವತೆಗಳ ಜನನದ ಇತಿಹಾಸ ಮತ್ತು ಕಾರಣಗಳನ್ನು ತಿಳಿದುಕೊಂಡಿದ್ದೆ. ನನ್ನನ್ನು ನೂರಾರು ಕಬ್ಬಿಣದ ನಗರಗ

ಳಿಂದ ಅಧೋಲೋಕದಲ್ಲಿ ರಕ್ಷಿಸಿಕೊಂಡಿದ್ದವು. ನಾನು ನನ್ನ ಸರ್ವಶಕ್ತಿಯನ್ನೂ ಪ್ರಯೋಗಿಸಿ ಆ ಬಂಧನವನ್ನು ಕಿತ್ತೊಗೆದು ಗಿಡಂಗನಹಾಗೆ ಈಚೆಗೆ ಬಂದು ಸ್ವರ್ಗವನ್ನು ಸೇರಿದೆ. ಹೀಗೆಂದು ವಾಮದೇವನು ಗರ್ಭದಲ್ಲಿ ಮಲಗಿಕೊಂಡಿರುವಾಗಲೇ ಇದನ್ನು ಹೇಳಿದನು.

**ಸ ಏವಂ ವಿದ್ವಾನಸ್ಮಾಚ್ಛರೀರ ಭೇದಾದೂರ್ಧ್ವ ಉತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಽಮೃತಃ ಸಮಭವತ್ ಸಮಭವತ್ ॥೬॥**

ಇವೆಲ್ಲವನ್ನೂ ತಿಳಿದುಕೊಂಡಿದ್ದುದರಿಂದಲೇ ವಾಮದೇವನು ತನ್ನ ದೇಹತಂತುಗಳನ್ನು ಹೆಣೆದುಹಾಕಿದ್ದರೂ ಕೂಡ ಅವೆಲ್ಲವನ್ನೂ ಹರಿದು ಕೊಂಡು ಸ್ವರ್ಗಲೋಕಕ್ಕೆ ಹೋಗಿ ಅಲ್ಲಿನ ಸಕಲ ಕಾಮ್ಯಾರ್ಥಗಳನ್ನೂ ಪಡೆಯುತ್ತ ಅಮೃತನಾದನು, ಅಮೃತನಾದನು.

## ತೃತೀಯೋಧ್ಯಾಯಃ

**ಓಂ ಕೋಽಯಮಾತ್ಮೇತಿ ವಯಮುಪಾಸ್ಮಹೇ ಕತರಃ ಸ ಆತ್ಮಾ। ಯೇನ ವಾ ರೂಪಂ ಪಶ್ಯತಿ, ಯೇನ ವಾ ಶಬ್ದಂ ಶೃಣೋತಿ, ಯೇನಾ ವಾ ಗಂಧಾನಾ ಜಿಘ್ರತಿ, ಯೇನವಾವಾಚಂ ವ್ಯಾಕರೋತಿ, ಯೇನ ವಾ ಸ್ವಾದು ಚಾಸ್ವಾದು ಚ ವಿಜಾನಾತಿ ॥೧॥**

ನಾವು ಯಾವನನ್ನು ಆತ್ಮ ಎಂದು ಉಪಾಸಿಸುತ್ತೇವೆಯೋ ಅವನು ಯಾರು ? ಇವರಿಬ್ಬರಲ್ಲಿ ಆತ್ಮನು ಯಾರು ? ಯಾರ ಮೂಲಕ ನಾವು ನೋಡುತ್ತೇವೆಯೋ, ಯಾಯುದರಿಂದ ಕೇಳುತ್ತೇವೆಯೋ, ಯಾವುದರಿಂದ ವಾಸನೆಗಳನ್ನು ಆಘ್ರಾಣಿಸುತ್ತೇವೋ, ಯಾವುದರ ಮೂಲಕ ನಾವು ಮಾತನಾಡುತ್ತೇವೋ, ಯಾರ ಮೂಲಕ ಸಿಹಿ, ಖಾರ ಮಸ್ಸರೆ ರುಚಿ ನೋಡುತ್ತೇವೆಯೋ ಇವರಲ್ಲಿ ಪ್ರಮುಖರು ಯಾರು ?

**ಯದೇತದ್ಧೃದಯಂ ಮನಶ್ಚೈತತ್ । ಸಂಜ್ಞಾನಮಾಜ್ಞಾನಂ ವಿಜ್ಞಾನಂ ಪ್ರಜ್ಞಾನಂ ಮೇಧಾ ದೃಷ್ಟಿರ್ಧೃತಿರ್ಮತಿರ್ಮನೀಷಾ ಜೂತಿಃ ಸ್ಮೃತಿಃ ಸಂಕಲ್ಪಃ ಕ್ರತುರಸುಃ ಕಾಮೋ ವಶ ಇತಿ—ಸರ್ವಾಣ್ಯೇವೈತಾನಿ ಪ್ರಜ್ಞಾನಸ್ಯ ನಾಮಧೇಯಾನಿ ಭವಂತಿ ॥೨॥**

ಹಿಂದೆ ಯಾವುದು ಹೇಳಲ್ಪಟ್ಟಿದೆಯೋ ಅದೇ ಈ ಹೃದಯವೂ ಮತ್ತು ಮನಸ್ಸು, ಸಂಜ್ಞಾನ, ಆಜ್ಞಾನ ವಿಜ್ಞಾನ, ಪ್ರಜ್ಞಾನ. ಮೇಧಸ್ಸು. ದೃಷ್ಟಿ, ಧೃತಿ, ಮನನ. ಮನನದ ವಿಷಯದಲ್ಲಿ ಸ್ವಾತಂತ್ರ್ಯ, ಮನಸ್ಸಿಗೆ ರೋಗಾದಿಗಳಿಂದ ಉಂಟಾಗುವ ದುಃಖಭಾವ. ಸ್ಮರಣೆ, ಸಂಕಲ್ಪ, ಅಧ್ಯವಸಾಯ, ಅಸು, ತೃಷ್ಣೆ, ವಶ ಹೀಗೆ ಇವೆಲ್ಲವೂ ಪ್ರಜ್ಞಾನದ ಹೆಸರುಗಳಾಗಿರುತ್ತವೆ.

**ಏಷ ಬ್ರಹ್ಮೈಷ ಇಂದ್ರ ಏಷ ಪ್ರಜಾಪತಿರೇತೇ ಸರ್ವೇ ದೇವಾ ಇಮಾನಿ ಚ ಪಂಚ ಮಹಾಭೂತಾನಿ—ಪೃಥಿವೀ ವಾಯುರಾಕಾಶ ಅಪೋಜ್ಯೋತೀಂಷೀತ್ಯೇತಾನೀಮಾನಿ ಚ ಕ್ಷುದ್ರಮಿಶ್ರಾಣೀವ ಬೀಜಾನೀತರಾಣಿ ಚೇತರಾಣಿ ಚಾಂಡಜಾನಿ ಚ ಜಾರುಜಾನಿ ಚ ಸ್ವೇದಜಾನಿ ಚೋದ್ಭಿಜ್ಜಾನಿ ಚಾಶ್ವಾ ಗಾವಃ ಪುರುಷಾ ಹಸ್ತಿನೋ ಯತ್ಕಿಂಚೇದಂ ಪ್ರಾಣಿಂ ಜಂಗಮಂ ಚ ಪತತ್ರಿ ಚ ಯಚ್ಚ ಸ್ಥಾವರಂ, ಸರ್ವಂ ತತ್ ಪ್ರಜ್ಞಾನೇತ್ರಂ ಪ್ರಜ್ಞಾನೇ ಪ್ರತಿಷ್ಠಿತಂ ಪ್ರಜ್ಞಾನೇತ್ರೋ ಲೋಕಃ ಪ್ರಜ್ಞಾ ಪ್ರತಿಷ್ಠಾ ಪ್ರಜ್ಞಾನಂ ಬ್ರಹ್ಮ ॥೩॥**

ಈ ಸೃಷ್ಟಿಕಾರಣನಾದ ಬ್ರಹ್ಮ. ದೇವತೆಗಳ ದೊರೆಯಾದ ಇಂದ್ರ ಸಕಲ ಪ್ರಜೆಗಳ ತಂದೆಯಾದ ಪ್ರಜಾಪತಿ, ಈ ದೇವರುಗಳೂ ಪಂಚಭೂತಗಳಾದ ಭೂಮಿ, ವಾಯು, ಆಕಾಶ ಜಲ ಮತ್ತು ತೇಜಸ್ಸುಗಳೂ, ಭಾರಿಯಾದ ಜೀವಿಗಳು, ಅಲ್ಪಜೀವಿಗಳು, ಎಲ್ಲಾ ಜಾತಿಯ ಬೀಜಗಳೂ, ಮೊಟ್ಟೆಗಳಿಂದ ಜನಿಸುವ, ಗರ್ಭಕೋಶದಿಂದ ಜನಿಸುವ ಎಲ್ಲಾ ಪ್ರಾಣಗಳೂ, ಬೆಳೆಯುತ್ತಿರುವ ಸಸ್ಯಗಳೂ, ಕುದುರೆಗಳೂ, ದನಕರುಗಳೂ, ಮಾನವರೂ, ಆನೆಗಳೂ, ಎಲ್ಲಾ ಜಾತಿಯ ಉಸಿರಾಡುವ ಮತ್ತು ಚಲಿಸುವ ಪ್ರಾಣಗಳೂ,

ರೆಕ್ಕೆಗಳಿದ್ದು ಹಾರಬಲ್ಲ ಪಕ್ಷಿಗಳೂ, ವೃಕ್ಷಗಳೂ, ಎಲ್ಲವೂ ಪ್ರಜ್ಞಾನೇತ್ರವು. ಪ್ರಜ್ಞಾನದಲ್ಲಿ ಪ್ರತಿಷ್ಠಿತನಾಗಿರುವುದು. ಲೋಕವು ಪ್ರಜ್ಞಾನೇತ್ರವು. ಪ್ರಜ್ಞೆಯು ಲೋಕಕ್ಕೆ ಪ್ರತಿಷ್ಠೆಯು. ಪ್ರಜ್ಞಾನವು ಬ್ರಹ್ಮ.

**ಸ ಏತೇನ ಪ್ರಜ್ಞೇನಾತ್ಮನಾಸ್ಮಾಲ್ಲೋಕಾದುತ್ಕ್ರಮ್ಯಾಮುಷ್ಮಿನ್ ಸ್ವರ್ಗೇ ಲೋಕೇ ಸರ್ವಾನ್ ಕಾಮಾನಾಪ್ತ್ವಾಮೃತಃ ಸಮಭವತ್ ಸಮಭವತ್ ॥೪॥**

ಈ ಪ್ರಜ್ಞಾವಾದ ಆತ್ಮರೂಪದಿಂದ ಇಹಪ್ರಪಂಚದಿಂದ ಮೇಲಕ್ಕೇರಿ ಆ ಸ್ವರ್ಗಲೋಕದಲ್ಲಿ ಸರ್ವಕಾಮಗಳನ್ನೂ ಹೊಂದಿ ವಾಮದೇವರು ಅಮೃತರಾದರು ; ಅಮೃತರಾದರು.

ಐತರೇಯೋಪನಿಷತ್ ಸಮಾಪ್ತಃ

**ಓಂ ವಾಙ್ಮೇ ಮನಸಿ ಪ್ರತಿಷ್ಠಿತಾ ಮನೋ ಮೇ ವಾಚಿ ಪ್ರತಿಷ್ಠಿತಮಾವಿರಾವೀರ್ಮ ಏಧಿ, ವೇದಸ್ಯ ಮ ಆಣೀ ಸ್ಥಃ, ಶ್ರುತಂ ಮೇ ಮಾ ಪ್ರಹಾಸೀರನೇನಾಽಧೀತೇನಾಽಹೋರಾತ್ರಾನ್ ಸಂದಧಾಮಿ, ಋತಂ ವದಿಷ್ಯಾಮಿ, ಸತ್ಯಂ ವದಿಷ್ಯಾಮಿ, ತನ್ಮಾಮವತು, ತದ್ವಕ್ತಾರಮವತು, ಅವತು ಮಾಮವತು ವಕ್ತಾರಮ್, ಅವತು ವಕ್ತಾರಮ್ ॥**

**ಓಂ ಶಾಂತಿಃ ಶಾಂತಿಃ ಶಾಂತಿಃ**

# ತೈತ್ತಿರೀಯೋಪನಿಷತ್

## ಶಿಕ್ಷಾವಲ್ಲೀ

### ಪ್ರಥಮಾನುವಾಕಃ

ಹರಿಃ ಓಂ ॥ ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ ಬ್ರಹ್ಮಾಸಿ । ತ್ವಮೇವ ಪ್ರತ್ಯಕ್ಷಂ ಬ್ರಹ್ಮ ವದಿಷ್ಯಾಮಿ । ಋತಂ ವದಿಷ್ಯಾಮಿ । ಸತ್ಯಂ ವದಿಷ್ಯಾಮಿ । ತನ್ಮಾಮವತು । ತದ್ವಕ್ತಾರಮವತು । ಅವತು ಮಾಂ । ಅವತು ವಕ್ತಾರಂ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥ ॥೧॥

ಮಿತ್ರನು ನಮಗೆ ಸುಖವನ್ನುಂಟುಮಾಡಲಿ, ವರುಣನು ನಮಗೆ ಸುಖವನ್ನುಂಟುಮಾಡಲಿ, ಇಂದ್ರನೂ, ಬೃಹಸ್ಪತಿಯೂ ನಮಗೆ ಸುಖವನ್ನುಂಟುಮಾಡಲಿ, ಉರುಕ್ರಮನಾದ ವಿಷ್ಣುವು ನಮಗೆ ಸುಖವನ್ನುಂಟುಮಾಡಲಿ, ಬ್ರಹ್ಮನಿಗೆ ನಮಸ್ಕಾರ ಹೇ ವಾಯುವೇ, ನಿನಗೆ ನಮಸ್ಕಾರ, ನೀನೇ ಪ್ರತ್ಯಕ್ಷ ಬ್ರಹ್ಮನಾಗಿರುತ್ತೀಯೆ. ನಿನ್ನನ್ನೇ ಪ್ರತ್ಯಕ್ಷ ಬ್ರಹ್ಮನೆಂದು ಹೇಳುತ್ತೇನೆ. ನಿನ್ನನ್ನೇ ಋತುವೆಂದು ಹೇಳುತ್ತೇನೆ. ನಿನ್ನನ್ನೇ ಸತ್ಯವೆಂದು ಹೇಳುತ್ತಿದ್ದೇನೆ. ಅದು ನನ್ನನ್ನು ಕಾಪಾಡಲಿ. ಅದು ಆಚಾರ್ಯನನ್ನು ಕಾಪಾಡಲಿ. ಓಂ ಶಾಂತಿಃ ಶಾಂತಿಃ ಶಾಂತಿಃ,

### ದ್ವಿತೀಯಾನುವಾಕಃ

ಓಂ ಶೀಕ್ಷಾಂ ವ್ಯಾಖ್ಯಾಸ್ಯಾಮಃ । ವರ್ಣಸ್ಸ್ವರಃ । ಮಾತ್ರಾ ಬಲಂ । ಸಾಮ ಸಂತಾನಃ । ಇತ್ಯುಕ್ತಃ ಶೀಕ್ಷಾಧ್ಯಾಯಃ ॥೨॥

ಓಂ. ಶಿಕ್ಷೆಯನ್ನು ವ್ಯಾಖ್ಯಾನಮಾಡುತ್ತೇವೆ ವರ್ಣ, ಸ್ವರ, ಮಾತ್ರೆ, ಬಲ, ಸಾಮ, ಸಂತಾನ ಹೀಗೆ ಶಿಕ್ಷಾವಿಷಯಕವಾದ ಅಧ್ಯಾಯ ಹೇಳಲ್ಪಟ್ಟಿದೆ.

ತೃತೀಯಾನುವಾಕಃ

**ಸಹ ನೌ ಯಶಃ । ಸಹ ನೌ ಬ್ರಹ್ಮವರ್ಚಸಂ । ಅಥಾತಃ ಸಗ್ಂ ಹಿತಾಯಾ ಉಪನಿಷದಂ ವ್ಯಾಖ್ಯಾಸ್ಯಾಮಃ । ಪಂಚಸ್ವಧಿ ಕರಣೇಷು । ಅಧಿಲೋಕ–ಮಧಿಜ್ಯೌತಿಷ–ಮಧಿವಿದ್ಯ–ಮಧಿಪ್ರಜ-ಮಧ್ಯಾತ್ಮಂ । ತಾ ಮಹಾಸಗ್ಂಹಿತಾ ಇತ್ಯಾಚಕ್ಷತೇ । ಅಥಾಧಿ ಲೋಕಂ । ಪೃಥಿವೀ ಪೂರ್ವರೂಪಂ । ದ್ಯೌರುತ್ತರರೂಪಂ । ಆಕಾಶಃ ಸಂಧಿಃ । ವಾಯುಃ ಸಂಧಾನಂ । ಇತ್ಯಧಿಲೋಕಂ । ಅಥಾಧಿಜ್ಯೌತಿಷಂ । ಅಗ್ನಿಃ ಪೂರ್ವರೂಪಂ । ಆದಿತ್ಯ ಉತ್ತರ ರೂಪಂ । ಆಪಃ ಸಂಧಿಃ । ವೈದ್ಯುತಃ ಸಂಧಾನಂ । ಇತ್ಯಧಿ ಜ್ಯೌತಿಷಂ । ಅಥಾಧಿವಿದ್ಯಂ । ಆಚಾರ್ಯಃ ಪೂರ್ವರೂಪಂ । ಅಂತೇವಾಸ್ಯುತ್ತರರೂಪಂ । ವಿದ್ಯಾ ಸಂಧಿಃ । ಪ್ರವಚನಗ್ಂ ಸಂಧಾನಂ । ಇತ್ಯಧಿ ವಿದ್ಯಂ । ಅಥಾಧಿ ಪ್ರಜಂ । ಮಾತಾ ಪೂರ್ವರೂಪಂ । ಪಿತೋತ್ತರರೂಪಂ । ಪ್ರಜಾ ಸಂಧಿಃ । ಪ್ರಜ ನನಗ್ಂ ಸಂಧಾನಂ । ಇತ್ಯಧಿಪ್ರಜಂ । ಅಥಾಧ್ಯಾತ್ಮಂ । ಅಧರಾ ಹನುಃ ಪೂರ್ವರೂಪಂ । ಉತ್ತರಾಹನುರುತ್ತರರೂಪಂ । ವಾಕ್ ಸಂಧಿಃ । ಜಿಹ್ವಾ ಸಂಧಾನಂ । ಇತ್ಯಧ್ಯಾತ್ಮಂ । ಇತೀಮಾ ಮಹಾಸಗ್ಂಹಿತಾಃ । ಯ ಏವಮೇತಾ ಮಹಾಸಗ್ಂಹಿತಾ ವ್ಯಾಖ್ಯಾತಾ ವೇದಾ । ಸಂಧೀಯತೇ ಪ್ರಜಯಾ ಪಶುಭಿಃ । ಬ್ರಹ್ಮ ವರ್ಚಸೇನಾನ್ನಾದ್ಯೇನ ಸುವರ್ಗೇಣ ಲೋಕೇನ ॥೩॥**

ನಮ್ಮಿಬ್ಬರಿಗೂ ಜೊತೆಯಲ್ಲಿ ಯಶಸ್ಸುಂಟಾಗಲಿ, ನಮ್ಮಿಬ್ಬರಿಗೂ ಜೊತೆಯಲ್ಲಿ ಬ್ರಹ್ಮವರ್ಚಸ್ಸು ಉಂಟಾಗಲಿ, ಈಗ ಆದುದರಿಂದ ಐದು ಆಶ್ರಯಗಳಲ್ಲಿ ಸಂಹಿತೆಯ ಉಪನಿಷತ್ತನ್ನು ವ್ಯಾಖ್ಯಾನ ಮಾಡುತ್ತೇವೆ.

ಅವೆಂದರೆ ಅಧಿಲೋಕ, ಅಧಿಜ್ಯೌತಿಷ, ಅಧಿವಿದ್ಯ, ಅಧಿಪ್ರಜ ಮತ್ತು ಅಧ್ಯಾತ್ಮ ಇವುಗಳನ್ನು ಮಹಾಸಂಹಿತೆಗಳೆಂದು ಹೇಳುತ್ತಾರೆ.

ಈಗ ಅಧಿಲೋಕ—ಪೃಥ್ವಿಯು ಹಿಂದಿನ ರೂಪ, ದ್ಯುಲೋಕವು ಮುಂದಿನ ರೂಪ, ಆಕಾಶವು ಸಂಧಿ, ವಾಯುವು ಸಂಧಾನ, ಹೀಗಿದೆ ಅಧಿ ಲೋಕ.

ಈಗ ಅಧಿ ಜ್ಯೌತಿಷ—ಅಗ್ನಿಯು ಹಿಂದಿನ ರೂಪ. ಆದಿತ್ಯನು ಮುಂದಿನ ರೂಪ, ನೀರು ಸಂಧಿ, ಮಿಂಚು ಸಂಧಾನ, ಹೀಗಿದೆ ಅಧಿ ಜ್ಯೌತಿಷ.

ಈಗ ಅಧಿವಿದ್ಯ—ಆಚಾರ್ಯನು ಹಿಂದಿನ ರೂಪ, ಶಿಷ್ಯನು ಮುಂದಿನ ರೂಪ, ವಿದ್ಯೆಯು ಸಂಧಿ. ಉಪದೇಶವು ಸಂಧಾನ, ಹೀಗಿದೆ ಅಧಿವಿದ್ಯ.

ಈಗ ಅಧಿಪ್ರಜ—ತಾಯಿಯು ಹಿಂದಿನ ರೂಪ, ತಂದೆಯು ಮುಂದಿನ ರೂಪ, ಪ್ರಜೆಯು ಸಂಧಿ, ಪ್ರಜನನವು ಸಂಧಾನ, ಹೀಗಿದೆ ಅಧಿಪ್ರಜ.

ಈಗ ಅಧ್ಯಾತ್ಮ—ಕೆಳದವಡೆಯು ಹಿಂದಿನ ರೂಪ, ಮೇಲು ದವಡೆಯು ಮುಂದಿನ ರೂಪ ಮಾತು ಸಂಧಿ, ನಾಲಿಗೆಯು ಸಂಧಾನ, ಹೀಗಿದೆ ಅಧ್ಯಾತ್ಮ.

ಹೀಗೆ ಇವು ಮಹಾಸಂಹಿತೆಗಳು. ವ್ಯಾಖ್ಯಾನಮಾಡಿದ ಈ ಮಹಾ ಸಂಹಿತೆಗಳನ್ನು ಯಾರು ಉಪಾಸನೆಮಾಡುವರೋ ಅವರು ಪ್ರಜೆ, ಪಶುಗಳು, ಬ್ರಹ್ಮವರ್ಚಸ್ಸು. ಅನ್ನವೇ ಮೊದಲಾದುವು, ಸ್ವರ್ಗಲೋಕ ಇವುಗಳನ್ನು ಹೊಂದುತ್ತಾರೆ.

ಚತುರ್ಥೋಽನುವಾಕಃ

**ಯಶ್ಛಂದಸಾಮೃಷಭೋ ವಿಶ್ವರೂಪಃ । ಛಂದೋಭ್ಯೋಽಧ್ಯಮೃತಾತ್ಸಂಬಭೂವ । ಸಮೇಂದ್ರೋ ಮೇಧಯಾಸ್ಪೃಣೋತು । ಅಮೃತಸ್ಯ ದೇವಧಾರಣೋ ಭೂಯಾಸಂ । ಶರೀರಂ ಮೇ ವಿಚರ್ಷಣಂ । ಜಿಹ್ವಾ ಮೇ ಮಧುಮತ್ತಮಾ । ಕರ್ಣಾಭ್ಯಾಂ ಭೂರಿ ವಿಶ್ರುವಂ । ಬ್ರಹ್ಮಣಃ ಕೋಶೋಽಸಿ ಮೇಧಯಾ ಪಿಹಿತಃ । ಶ್ರುತಂ ಮೇ ಗೋಪಾಯ । ಆವಹನ್ತೀ ವಿತನ್ವಾನಾ । ಕುರ್ವಾಣಾ**

ಚೀರವಮಾತ್ಮನಃ । ವಾಸಾಗ್ಂಸಿ ಮಮ ಗಾವಶ್ಚ । ಅನ್ನಪಾನೇನ ಸರ್ವದಾ । ತತೋ ಮೇ ಶ್ರಿಯಮಾವಹ । ಲೋಮಶಾಂ ಪಶುಭಿಃ ಸಹ ಸ್ವಾಹಾ । ಆಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ವಿಮಾಽಽಯಂತು ಬ್ರಹ್ಮಚಾರಿಣಃ ಸ್ವಾಹಾ । ಪ್ರಮಾಽಽಯಂತು ಬ್ರಹ್ಮಚಾರಿಣಃ ಸ್ವಾಹಾ । ದಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ಶಮಾಯಂತು ಬ್ರಹ್ಮಚಾರಿಣಃ ಸ್ವಾಹಾ । ಯಶೋ ಜನೇಽಸಾನಿ ಸ್ವಾಹಾ । ಶ್ರೇಯಾನ್ ವಸ್ಯಸೋಽಸಾನಿ ಸ್ವಾಹಾ । ತಂ ತ್ವಾ ಭಗ ಪ್ರವಿಶಾನಿ ಸ್ವಾಹಾ । ಸಮಾಭಗ ಪ್ರವಿಶ ಸ್ವಾಹಾ । ತಸ್ಮಿನ್ ಸಹಸ್ರಶಾಖೇ । ನಿಭಗಾಹಂ ತ್ವಯಿ ಮೃಜೇ ಸ್ವಾಹಾ । ಯಥಾಽಽಪಃ ಪ್ರವತಾಽಽಯಂತಿ । ಯಥಾ ಮಾಸಾ ಅಹರ್ಜರಂ । ಏವಂ ಮಾಂ ಬ್ರಹ್ಮಚಾರಿಣಃ । ಧಾತರಾಯಂತು ಸರ್ವತಃ ಸ್ವಾಹಾ । ಪ್ರತಿ ವೇಶೋಽಸಿ । ಪ್ರಮಾಭಾಹಿ । ಪ್ರಮಾಪದ್ಯಸ್ವ ॥೪॥

ಯಾವನು ವೇದಗಳಿಗೆ ಋಷಭನಾಗಿರುವನೋ, ಸರ್ವರೂಪನಾಗಿರುವನೋ, ಅಮೃತಸ್ವರೂಪನಾದ ವೇದಗಳಿಂದ ಉದ್ಭವಿಸಿರುವನೋ, ಆ ಇಂದ್ರನು ನನ್ನನ್ನು ಪ್ರಜ್ಞೆಯಿಂದ ಬಲಪಡಿಸಲಿ. ಎಲೈ ದೇವನೇ ನಾನು ಬ್ರಹ್ಮಜ್ಞಾನವನ್ನು ಹೊಂದುವಂತಾಗಲಿ, ನನ್ನ ಶರೀರವು ಯೋಗ್ಯವಾಗಲಿ, ನನ್ನ ನಾಲಿಗೆಯು ಸವಿಮಾತುಗಳನ್ನಾಡುವುದಾಗಲಿ. ನಾನು ಕಿವಿಗಳಿಂದ ಹೆಚ್ಚು ಕೇಳುವವನಾಗಲಿ, ನೀನು ಬ್ರಹ್ಮದ ಕೋಶವಾಗಿರುತ್ತೀಯೆ, ಲೌಕಿಕ ಜ್ಞಾನದಿಂದ ಮುಚ್ಚಲ್ಪಟ್ಟಿರುತ್ತೀಯೆ ನನ್ನ ವಿಜ್ಞಾನವನ್ನು ಕಾಪಾಡು,

ಅನಂತರ ಅನ್ನಪಾನಗಳನ್ನೂ, ಬಟ್ಟೆಗಳನ್ನೂ ಹಸುಗಳನ್ನೂ ಯಾವಾಗಲೂ ತರುವವಳಾದ, ಹೆಚ್ಚಿಸುವವಳಾದ ಮತ್ತು ಶೀಘ್ರವಾಗಿ ಮಾಡುವವಳಾದ, ಪಸುಗಳಿಂದ ಕೂಡಿದ, ತುಪ್ಪದಿಂದ ಕೂಡಿದ ಶ್ರೀಯನ್ನು ನನಗೆ ತರುವವನಾಗು, ಬ್ರಹ್ಮಚಾರಿಗಳು ನನ್ನಲ್ಲಿಗೆ ಬರಲಿ ಸ್ವಾಹಾ. ಬ್ರಹ್ಮಚಾರಿಗಳು ನನ್ನಲ್ಲಿಗೆ ಅನೇಕಕಡೆಗಳಿಂದ ಬರಲಿ ಸ್ವಾಹಾ, ಬ್ರಹ್ಮಚಾರಿಗಳು ನನ್ನಲ್ಲಿಗೆ ಪ್ರಕೃಷ್ಟರೂಪದಿಂದ ಬರಲಿ ಸ್ವಾಹಾ, ಬ್ರಹ್ಮಚಾರಿಗಳು ದಮ ಉಳ್ಳವರಾಗಿರಲಿ ಸ್ವಾಹಾ, ಬ್ರಹ್ಮಚಾರಿಗಳು ಶಮ ಉಳ್ಳವರಾಗಿರಲಿ ಸ್ವಾಹಾ, ಜನರಲ್ಲಿ

ನಾನು ಯಶಸ್ವಿಯಾಗಲಿ ಸ್ವಾಹಾ. ಧನಿಕರಲ್ಲಿ ನಾನು ಹೆಚ್ಚಿನ ಧನಿಕನಾಗಲಿ ಸ್ವಾಹಾ, ಎಲೈ ಭಗವಂತನೇ ನಮ್ಮಿಬ್ಬರಿಗೂ ಏಕತ್ವ ಉಂಟಾಗಲಿ ಸ್ವಾಹಾ, ನಾನು ನಿನ್ನ ಆತ್ಮವೇ ಆಗಲಿ ಸ್ವಾಹಾ, ಎಲೈ ಭಗವಂತನೇ ಸಹಸ್ರ ಶಾಖೆಗಳುಳ್ಳ ನಿನ್ನಲ್ಲಿ ನನ್ನ ಸಕಲ ಪಾಪಗಳನ್ನೂ ತೊಳೆದುಕೊಳ್ಳುತ್ತೇನೆ ಸ್ವಾಹಾ, ಎಲೈ ಸ್ವಾಮಿಯೇ ನೀರು ತಗ್ಗಿನ ಪ್ರದೇಶಗಳಿಗೆ ಹರಿಯುವಂತೆ, ತಿಂಗಳುಗಳು ಸಂವತ್ಸರವನ್ನು ಸೇರುವಂತೆ, ಬ್ರಹ್ಮಚಾರಿಗಳು ಎಲ್ಲ ಕಡೆಗಳಿಂದಲೂ ಬಂದು ನನ್ನನ್ನು ಸೇರಿಕೊಳ್ಳಲಿ ಸ್ವಾಹಾ. ನೀನು ವಿಶ್ರಾಮಸ್ಥಾನವಾಗಿರುತ್ತೀಯೆ. ನನಗೆ ಆತ್ಮಸ್ವರೂಪವನ್ನು ತೋರಿಸು, ನನ್ನನ್ನು ಹೊಂದು.

### ಪಂಚಮೋಽನುವಾಕಃ

ಭೂ-ರ್ಭುವ-ಸ್ಸುವ-ರಿತಿ ವಾ ಏತಾಸ್ತಿಸ್ರೋ ವ್ಯಾಹೃತಯಃ । ತಾಸಾಮುಹಸ್ಮೈತಾಂ ಚತುರ್ಥೀಂ । ಮಾಹಾಚಮಸ್ಯಃ ಪ್ರವೇದಯತೇ । ಮಹ ಇತಿ । ತದ್ ಬ್ರಹ್ಮ । ಸ ಆತ್ಮಾ । ಅಂಗಾನ್ಯನ್ಯಾ ದೇವತಾಃ । ಭೂರಿತಿ ವಾ ಅಯಂ ಲೋಕಃ । ಭುವ ಇತ್ಯಂತರಿಕ್ಷಂ । ಸುವರಿತ್ಯಸೌ ಲೋಕಃ । ಮಹ ಇತ್ಯಾಽದಿತ್ಯಃ । ಆದಿತ್ಯೇನ ವಾವ ಸರ್ವೇ ಲೋಕಾ ಮಹೀಯಂತೇ । ಭೂರಿತಿ ವಾ ಅಗ್ನಿಃ । ಭುವ ಇತಿ ವಾಯುಃ । ಸುವರಿತ್ಯಾದಿತ್ಯಃ । ಮಹ ಇತಿ ಚಂದ್ರಮಾಃ । ಚಂದ್ರಮಸಾ ವಾವ ಸರ್ವಾಣಿ ಜ್ಯೋತೀಗ್ಂಷಿ ಮಹೀಯಂತೇ । ಭೂರಿತಿ ವಾ ಋಚಃ । ಭುವ ಇತಿ ಸಾಮಾನಿ । ಸುವರಿತಿ ಯಜೂಗ್ಂಷಿ । ಮಹ ಇತಿ ಬ್ರಹ್ಮ । ಬ್ರಹ್ಮಣಾ ವಾವ ಸರ್ವೇ ವೇದಾ ಮಹೀಯಂತೇ । ಭೂರಿತಿ ವೈ ಪ್ರಾಣಃ । ಭುವ ಇತ್ಯಪಾನಃ । ಸುವರಿತಿ ವ್ಯಾನಃ । ಮಹ ಇತ್ಯನ್ನಂ । ಅನ್ನೇನ ವಾವ ಸರ್ವೇ ಪ್ರಾಣಾ ಮಹೀಯಂತೇ । ತಾ ವಾ ಏತಾಶ್ಚತಸ್ರಶ್ಚತುರ್ಧಾ । ಚತಸ್ರಶ್ಚತಸ್ರೋ ವ್ಯಾಹೃತಯಃ । ತಾ ಯೋ ವೇದ । ಸ ವೇದ ಬ್ರಹ್ಮ । ಸರ್ವೇಽಸ್ಮೈ ದೇವಾ ಬಲಿಮಾವಹಂತಿ ॥೫॥

ಭೂಃ, ಭುವಃ, ಸುವಃ ಎಂದು ಮೂರು ಉಚ್ಚಾರಣೆಗಳಿವೆ. ಅವುಗಳಲ್ಲಿ ನಾಲ್ಕನೆಯದು ಮಹಃ ಎಂಬುದು. ಇದನ್ನು ಮಹಾಚಮಸ್ಯನು ಅರಿತು ಕೊಂಡನು. ಅದೇ ಬ್ರಹ್ಮ, ಅದೇ ಆತ್ಮ ಅವೇ ಉಳಿದ ದೇವತೆಗಳ ಅಂಗಾಂಗಗಳು,

ಭೂಃ ಎಂಬುದೇ ಈ ಲೋಕ. ಭುವಃ ಎಂಬುದು ಅಂತರಿಕ್ಷ, ಸುವಃ ಎಂಬುದು ಆಲೋಕ, ಮಹಃ ಎಂಬುದು ಆದಿತ್ಯ, ಆದಿತ್ಯನಿಂದಲೇ ಅಲ್ಲವೇ ಎಲ್ಲಾ ಲೋಕಗಳೂ ಅಬಿವೃದ್ಧಿ ಹೊಂದುವುದು ? ಭೂಃ ಎಂಬುದೇ ಅಗ್ನಿ, ಭುವಃ ಎಂಬುದು ವಾಯು, ಸುವಃ ಎಂಬುದು ಆದಿತ್ಯ, ಮಹಃ ಎಂಬುದು ಚಂದ್ರ, ಚಂದ್ರನಿಂದಲೇ ಅಲ್ಲವೆ ಎಲ್ಲಾ ಜ್ಯೋತಿಗಳೂ ವರ್ಧಿಸುವುದು ?

ಭೂಃ ಎಂಬುದೇ ಋಕ್ಕುಗಳು, ಭುವಃ ಎಂಬುದು ಸಾಮಗಳು, ಸುವಃ ಎಂಬುದು ಯಜುಸ್ಸುಗಳು, ಮಹಃ ಎಂಬುದು ಬ್ರಹ್ಮ, ಬ್ರಹ್ಮನಿಂದಲೇ ಅಲ್ಲವೆ ಎಲ್ಲ ವೇದಗಳೂ ವರ್ಧಿಸುವುವು ?

ಭೂಃ ಎಂಬುದೇ ಪ್ರಾಣ, ಭುವಃ ಎಂಬುದು ಅಪಾನ, ಸುವಃ ಎಂಬುದು ವ್ಯಾನ, ಮಹಃ ಎಂಬುದು ಅನ್ನ. ಅನ್ನದಿಂದಲೇ ಅಲ್ಲವೇ ಎಲ್ಲ ಪ್ರಾಣಿಗಳೂ ಅಭಿವೃದ್ಧಿ ಹೊಂದುವುದು ?

ಆ ಈ ಉಚ್ಚಾರಣೆಗಳು ನಾಲ್ಕು ನಾಲ್ಕು ಭಾಗಗಳಾಗಿ ನಾಲ್ಕು ಬಗೆಯದಾಗಿರುತ್ತವೆ. ಯಾವನು ಅವುಗಳನ್ನು ಅರಿಯುತ್ತಾನೋ ಅವನು ಬ್ರಹ್ಮನನ್ನು ಅರಿತಿರುವನು. ಎಲ್ಲ ದೇವತೆಗಳೂ ಇವನಿಗೆ ಕಾಣಿಕೆಯನ್ನು ಸಲ್ಲಿಸುತ್ತಾರೆ.

ಷಷ್ಠೋಽನುವಾಕಃ

ಸ ಯ ಏಷೋಽಂತರ್ಹೃದಯ ಆಕಾಶಃ । ತಸ್ಮಿನ್ನಯಂ ಪುರುಷೋ ಮನೋಮಯಃ । ಅಮೃತೋ ಹಿರಣ್ಮಯಃ ! ಅಂತರೇಣ ತಾಲುಕೇ । ಯ ಏಷಸ್ತನ ಇವಾವಲಂಬತೇ । ಸೇಂದ್ರಯೋನಿಃ । ಯತ್ರಾಸೌ ಕೇಶಾಂತೋ ವಿವರ್ತತೇ । ವ್ಯಪೋಹ್ಯ

**ಶೀರ್ಷ ಕಪಾಲೇ । ಭೂರಿತ್ಯಗ್ನೌ ಪ್ರತಿತಿಷ್ಠತಿ । ಭುವ 'ಇತಿ ವಾಯೌ । ಸುವರಿತ್ಯಾದಿತ್ಯೇ । ಮಹ ಇತಿ ಬ್ರಹ್ಮಣಿ । ಆಪ್ನೋತಿ ಸ್ವಾರಾಜ್ಯಂ । ಆಪ್ನೋತಿ ಮನಸಸ್ಪತಿಂ । ವಾಕ್ಪತಿಶ್ಚಕ್ಷುಷ್ಪತಿಃ । ಶ್ರೋತ್ರಪತಿರ್ವಿಜ್ಞಾನಪತಿಃ । ಏತತ್ತತೋ ಭವತಿ । ಆಕಾಶ ಶರೀರಂ ಬ್ರಹ್ಮ । ಸತ್ಯಾತ್ಮ ಪ್ರಾಣಾರಾಮಂ ಮನ ಆನಂದಂ । ಶಾಂತಿ ಸಮೃದ್ಧಮಮೃತಂ । ಇತಿ ಪ್ರಾಚೀನ ಯೋಗ್ಯೋಪಾಸ್ವ ||೬||**

ಆ ಮಹಾಪುರುಷನು ಹೃದಯಾಂತರಾಳದಲ್ಲಿರುವ ಆಕಾಶದಲ್ಲಿ ಮನೋಮಯಕೋಶವನ್ನು ರಚಿಸಿಕೊಂಡು ಅಲ್ಲಿ ವಾಸಿಸುತ್ತಿದ್ದಾನೆ. ಆತನು ಹಿರಣ್ಮಯನೂ, ಅಮೃತಸ್ವರೂಪಿಯೂ ಆಗಿದ್ದಾನೆ. ಎರಡು ಕಾಲುಗಳ ನಡುವೆ ಸ್ತನದಂತೆ ನೇತಾಡುತ್ತಿರುವ ಕಿರುನಾಲಗೆಯ ಮಧ್ಯದಲ್ಲಿ ಸುಷುಮ್ನಾ ನಾಡಿಯು ಹೋಗುವುದು. ಅದು ಕೇಶಗಳು ವಿಭಾಗವಾಗಿರುವ ಪ್ರದೇಶವನ್ನು ಸೇರಿ ಅಲ್ಲಿಂದ ಶೀರ್ಷಕಪಾಲಗಳನ್ನು ಭೇದಿಸಿಕೊಂಡುಹೋಗಿರುತ್ತದೆ. ಅದೇ ಬ್ರಹ್ಮಪ್ರಾಪ್ತಿಯ ಮಾರ್ಗ. ಉಪಾಸಕನು ಅದರ ಮೂಲಕ ಹೊರಕ್ಕೆ ಬಂದು ಭೂಃ ಎಂಬ ಅಗ್ನಿಯಲ್ಲಿಯೂ ಭುವಃ ಎಂಬ ವಾಯುವಿನಲ್ಲಿಯೂ, ಸುವಃ ಎಂಬ ಸೂರ್ಯನಲ್ಲಿಯೂ, ಮಹಃ ಎಂಬ ಬ್ರಹ್ಮನಲ್ಲೂ ನಿಲ್ಲುವನು. ಅವನೇ ಸ್ವರಾಜ್ಯವಾಗುತ್ತದೆ. ಅವನೇ ಮನಸ್ಸಿಗೂ ಯಜಮಾನನಾಗುತ್ತಾನೆ. ಅವನೇ ವಾಕ್ಕಿಗೂ, ಚಕ್ಷುವಿಗೂ, ಶ್ರೋತ್ರಕ್ಕೂ, ವಿಜ್ಞಾನಕ್ಕೂ ಯಜಮಾನನಾಗುತ್ತಾನೆ. ಇವೆಲ್ಲವನ್ನೂ ತಾನೇ ಆಗುತ್ತಾನೆ. ಆಕಾಶವನ್ನೇ ಶರೀರವಾಗಿ ಉಳ್ಳವನೂ, ಸತ್ಯಾತ್ಮನೂ, ಪ್ರಾಣಾರಾಮನೂ, ಮನ ಆನಂದನೂ, ಶಾಂತಿ ಸಮೃದ್ಧನೂ, ಅಮೃತನೂ ಆದ ಬ್ರಹ್ಮನನ್ನು ಎಲೈ ಯೋಗಿ ಸಂಜಾತನೇ ನೀನು ಉಪಾಸಿಸಿ ಅವನನ್ನು ಹೊಂದು.

ಸಪ್ತಮೋನುವಾಕಃ

**ಪೃಥಿವ್ಯಂತರಿಕ್ಷಂ ದ್ಯೌರ್ದಿಶೋಽವಾಂತರ ದಿಶಾಃ । ಅಗ್ನಿ-ರ್ವಾಯುರಾದಿತ್ಯಶ್ಚಂದ್ರಮಾ ನಕ್ಷತ್ರಾಣಿ । ಆಪ ಓಷಧಯೋ**

**ವನಸ್ಪತಯ ಆಕಾಶ ಆತ್ಮಾ । ಇತ್ಯಧಿಭೂತಂ । ಅಥಾಧ್ಯಾತ್ಮಂ । ಪ್ರಾಣೋಽವ್ಯಾನೋಽಪಾನ ಉದಾನಃ ಸಮಾನಃ । ಚಕ್ಷುಃ ಶ್ರೋತ್ರಂ ಮನೋ ವಾಕ್ ತ್ವಕ್ । ಚರ್ಮಮಾಗ್‍ಂಸಗ್‍ಂ ಸ್ನಾವಾಸ್ಥಿ ಮಜ್ಜಾ । ಏತದಧಿವಿಧಾಯ ಋಷಿರವೋಚತ್ । ಪಾಂಕ್ತಂ ವಾ ಇದಗ್‍ಂ ಸರ್ವಂ । ಪಾಂಕ್ತೇನೈವ ಪಾಂಕ್ತಗ್‍ಂ ಸ್ಪೃಣೋತಿ ||೭||**

ಪೃಥ್ವಿ, ಆಕಾಶ, ಸ್ವರ್ಗ, ದಿಕ್ಕುಗಳು, ಅಂತರ್ದಿಕ್ಕುಗಳು ಇವು ಲೋಕಪಾಂಕ್ತ ಜಲ, ವಾಯು, ಸೂರ್ಯ, ಚಂದ್ರ, ನಕ್ಷತ್ರಗಳು ಇವು ದೇವತಾಪಾಂಕ್ತ. ಸಸ್ಯಗಳು, ಮೂಲಿಕೆಗಳು, ಆಕಾಶ ಆತ್ಮ ಇವು ಭೂತ ಪಾಂಕ್ತಗಳು. ಇವು ಅಧಿಭೂತ, ಆತ್ಮಕ್ಕೆ ಸಂಬಂಧಿಸಿದ್ದು ಪ್ರಾಣ, ವ್ಯಾನ, ಅಪಾನ, ಉದಾನ, ಸಮಾನ ಇವು ವಾಯು ಪಾಂಕ್ತ. ಕಣ್ಣು, ಕಿವಿ, ಮನಸ್ಸು, ವಾಕ್, ಸ್ಪರ್ಶ ಇವು ಇಂದ್ರಿಯಾ ಪಾಂಕ್ತ. ಚರ್ಮ, ಮಾಂಸ, ನರಗಳು, ಮೂಳೆ, ಕೊಬ್ಬು ಇವು ಧಾತೃಪಾಂಕ್ತ. ಈ ರೀತಿ ಪಾಂಕ್ತೋಪಾಸನೆಯನ್ನು ಪರಿಕಲ್ಪಿಸಿ ಋಷಿಯು ಹೇಳಿದನು : ಇದೆಲ್ಲವೂ ಪಾಂಕ್ತವೇ ಪಾಂಕ್ತದಿಂದಲೇ ಪಾಂಕ್ತವನ್ನು ಪೂರ್ಣಗೊಳಿಸುತ್ತಾನೆ.

## ಅಷ್ಟಮೋಽನುವಾಕಃ

**ಓಮಿತಿ ಬ್ರಹ್ಮ । ಓಮಿತೀದಗ್‍ಂ ಸರ್ವಂ । ಓಮಿತ್ಯೇತದನುಕೃತಿ ಹಸ್ಮ ವಾ ಅಪ್ಯೋಽಶ್ರಾವಯಂತಿ । ಓಮಿತಿ ಸಾಮಾನಿ ಗಾಯಂತಿ । ಓಗ್‍ಂಶೋಮಿತಿ ಶಸ್ತ್ರಾಣಿ ಶಗ್‍ಂಸಂತಿ । ಓಮಿತ್ಯಧ್ವರ್ಯುಃ ಪ್ರತಿಗರಂ ಪ್ರತಿಗೃಣಾತಿ । ಓಮಿತಿ ಬ್ರಹ್ಮಾ ಪ್ರಸೌತಿ । ಓಮಿತ್ಯಗ್ನಿಹೋತ್ರಮನುಜಾನಾತಿ । ಓಮಿತಿ ಬ್ರಾಹ್ಮಣಃ ಪ್ರವಕ್ಷ್ಯನ್ನಾಹ ಬ್ರಹ್ಮೋಪಾಪ್ನವಾನೀತಿ । ಬ್ರಹ್ಮೈವೋಪಾಪ್ನೋತಿ ||೮||**

ಓಂ ಎಂಬುದು ಬ್ರಹ್ಮ. ಈ ಸಮಸ್ತವೂ ಓಂ ಎಂಬುದು. ಓಂ ಎಂಬುದು ಅನುಕರಣ. ಓಂ ದೇವತೆಗಳಿಗೆ ಹವಿಸ್ಸನ್ನು ಕೊಡುವ ಕಾಲವು

ಸಮೀಪಿಸಿತೆಂದು ತಿಳಿಸು ಎಂದು ಅಧ್ವರ್ಯುವು ಹೇಳುತ್ತಾನೆ. ಓಂ ಎಂದು ಸಾಮಗಳನ್ನು ಹಾಡುತ್ತಾರೆ. ಓಂ ಶೋಂ ಎಂದು ಹೋತೃಗಳು ಶಾಸ್ತ್ರಗಳನ್ನು ಪಠಿಸುತ್ತಾರೆ. ಓಂ ಎಂದು ಅಧ್ವರ್ಯುವು ಪ್ರೋತ್ಸಾಹ ವಾಕ್ಯವನ್ನು ಹೇಳುತ್ತಾನೆ. ಓಂ ಎಂದು ಬ್ರಹ್ಮನು ಅನುಮತಿಯನ್ನು ಕೊಡುತ್ತಾನೆ. ಯಜಮಾನನು ಓಂ ಎಂದು ಅಗ್ನಿಹೋತ್ರಕ್ಕೆ ಆಜ್ಞಾಪಿಸುತ್ತಾನೆ. ವೇದವನ್ನು ನಾನು ಹೊಂದುವಂತಾಗಲಿ ಎಂದು ಪ್ರವಚನ ಮಾಡುವವನಾಗಿ ಬ್ರಾಹ್ಮಣನು ಓಂ ಎಂದು ಹೇಳುತ್ತಾನೆ. ಅವನು ಬ್ರಹ್ಮವನ್ನು ಹೊಂದುತ್ತಾನೆ.

ನವಮೋಽನುವಾಕಃ

**ಋತಂ ಚ ಸ್ವಾಧ್ಯಾಯ ಪ್ರವಚನೇ ಚ । ಸತ್ಯಂ ಚ ಸ್ವಾಧ್ಯಾಯ ಪ್ರವಚನೇ ಚ । ತಪಶ್ಚ ಸ್ವಾಧ್ಯಾಯ ಪ್ರವಚನೇ ಚ । ದಮಶ್ಚ ಸ್ವಾಧ್ಯಾಯ ಪ್ರವಚನೇ ಚ । ಶಮಶ್ಚ ಸ್ವಾಧ್ಯಾಯ ಪ್ರವಚನೇ ಚ । ಅಗ್ನಯಶ್ಚ ಸ್ವಾಧ್ಯಾಯ ಪ್ರವಚನೇ ಚ । ಅಗ್ನಿಹೋತ್ರಂ ಚ ಸ್ವಾಧ್ಯಾಯ ಪ್ರವಚನೇ ಚ । ಅತಿಥಯಶ್ಚ ಸ್ವಾಧ್ಯಾಯ ಪ್ರವಚನೇ ಚ । ಮಾನುಷಂ ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜಾ ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜನಶ್ಚ ಸ್ವಾಧ್ಯಾಯ ಪ್ರವಚನೇ ಚ । ಪ್ರಜಾತಿಶ್ಚ ಸ್ವಾಧ್ಯಾಯ ಪ್ರವಚನೇ ಚ । ಸತ್ಯಮಿತಿ ಸತ್ಯವಚಾ ರಾಥೀತರಃ । ತಪ ಇತಿ ತಪೋ ನಿತ್ಯಃ ಪೌರುಶಿಷ್ಟಿಃ । ಸ್ವಾಧ್ಯಾಯ ಪ್ರವಚನೇ ಏವೇತಿ ನಾಕೋ ಮೌದ್ಗಲ್ಯಃ ॥೯॥**

ಪ್ರಾಣವನ್ನು ನೇವಿಸುವಾಗ ವೇದವನ್ನು ಕಲಿಯುವುದು, ಕಲಿಸುವುದೂ ಜರುಗುತ್ತಿರಲಿ. ಸತ್ಯಕಾರ್ಯಗಳನ್ನು ಮಾಡುವಾಗ ವೇದಗಳ ಪ್ರವಚನವಾಗುತ್ತಿರಲಿ. ತಪಸ್ಸು ಮಾಡುವಾಗ ವೇದ ಪ್ರವಚನವಾಗುತ್ತಿರಲಿ. ಉಪಶಮ ಕಾರ್ಯಗಳಲ್ಲಿ ವೇದಪ್ರವಚನವಾಗುತ್ತಿರಲಿ. ಅಗ್ನಿಕಾರ್ಯಗಳು ಜರುಗುವಾಗ ವೇದಪ್ರವಚನಗಳಾಗುತ್ತಿರಲಿ. ಹೋಮಕಾರ್ಯಗಳಾಗುವಾಗ ವೇದಪ್ರವ

ಚನವಾಗುತ್ತಿರಲಿ ಅತಿಥಿಕಾರ್ಯಗಳಾಗುವಾಗ ವೇದಪ್ರವಚನವಾಗುತ್ತಿರಲಿ. ಲೌಕಿಕ ವ್ಯವಹಾರಗಳಾಗುವಾಗ ವೇದಪ್ರವಚನಗಳಾಗುತ್ತಿರಲಿ. ಪ್ರಜಾ ಕಾರ್ಯವಾಗುವಾಗ ವೇದಪ್ರವಚನವಾಗುತ್ತಿರಲಿ. ಭಾರ್ಯಾಗಮನಕಾಲದಲ್ಲಿ ವೇದಪ್ರವಚನವಾಗುತ್ತಿರಲಿ. ಪೌತ್ರನನ್ನು ಪಡೆಯುವಾಗ ವೇದಪ್ರವಚನ ವಾಗುತ್ತಿರಲಿ. ಸತ್ಯವನ್ನೇ ಅನುಷ್ಠಾನಮಾಡಬೇಕೆಂದು ಸತ್ಯವಂತನಾದ ರಾಥೀತರನ ಅಭಿಪ್ರಾಯ. ತಪಸ್ಸನ್ನೇ ಅನುಷ್ಠಾನಮಾಡಬೇಕೆಂದು ತಪೋ ನಿರತನಾದ ಪೌರುಶಿಷ್ಟಿಯ ಅಭಿಪ್ರಾಯ. ಸ್ವಾಧ್ಯಾಯ ಪ್ರವಚನಗಳನ್ನೇ ಅನುಷ್ಠಿಸಬೇಕೆಂದು ಮುದ್ಗಲನ ಮಗನಾದ ನಾಕನ ಅಭಿಪ್ರಾಯ. ಅದೇ ತಪಸ್ಸು, ಅದೇ ತಪಸ್ಸು.

ದಶಮೋಽನುವಾಕಃ

**ಅಹಂ ವೃಕ್ಷಸ್ಯರೇರಿವಾ । ಕೀರ್ತಿಃ ಪೃಷ್ಠಂ ಗಿರೇರಿವ । ಊರ್ಧ್ವ ಪವಿತ್ರೋ ವಾಜಿನೀವ ಸ್ವಮೃತಮಸ್ಮಿ । ದ್ರವಿಣಗ್ಂ ಸವರ್ಚಸಂ । ಸುಮೇಧಾ ಅಮೃತೋಕ್ಷಿತಃ । ಇತಿ ತ್ರಿಶಂಕೋ-ರ್ವೇದಾನುವಚನಂ ॥೧೦॥**

ನಾನು ಸಂಸಾರವೆಂಬ ವೃಕ್ಷವನ್ನು ಪ್ರೇರಿಸುವೆನು, ನನ್ನ ಕೀರ್ತಿಯು ಪರ್ವತಶಿಖರದಂತೆ ಉನ್ನತವಾಗಿರುತ್ತದೆ, ಪರಬ್ರಹ್ಮವೇ ನನ್ನ ಕಾರಣ, ಸೂರ್ಯನಲ್ಲಿ ಆತ್ಮತತ್ತ್ವವು ಇರುವಂತೆ ನಾನೂ ಆತ್ಮಸ್ವರೂಪನಾಗಿರುವನು, ನಾನು ವರ್ಚಸ್ಸಿನಿಂದ ಕೂಡಿದ ಆತ್ಮತತ್ತ್ವವಾಗಿರುತ್ತೇನೆ ಮೇಧಾಸಂಪನ್ನ ನಾಗಿರುತ್ತೇನೆ, ನಾನು ಅಮೃತನೂ ಅವ್ಯಯನೂ ಆಗಿರುತ್ತೇನೆ, ಇದು ತ್ರಿಶಂಕುವಿನ ವೇದಾನುವಚನ.

ಏಕಾದಶೋಽನುವಾಕಃ

**ವೇದಮನೂಚ್ಯಾಚಾರ್ಯೋಽಂತೇವಾಸಿನಮನುಶಾಸ್ತಿ । ಸತ್ಯಂ ವದ । ಧರ್ಮಂ ಚರ । ಸ್ವಾಧ್ಯಾಯಾನ್ಮಾ ಪ್ರಮದಃ । ಆಚಾ-**

ರ್ಯಾಯ ಪ್ರಿಯಂ ಧನಮಾಹೃತ್ಯ ಪ್ರಜಾತಂತುಂ ಮಾ ವ್ಯವ
ಚ್ಛೇತ್ಸೀಃ । ಸತ್ಯಾನ್ನ ಪ್ರಮದಿತವ್ಯಂ । ಧರ್ಮಾನ್ನ ಪ್ರಮದಿ
ತವ್ಯಂ । ಕುಶಲಾನ್ನ ಪ್ರಮದಿತವ್ಯಂ । ಭೂತ್ಯೈನ ಪ್ರಮದಿ
ತವ್ಯಂ । ಸ್ವಾಧ್ಯಾಯ ಪ್ರವಚನಾಭ್ಯಾಂ ನ ಪ್ರಮದಿತವ್ಯಂ । ದೇವ
ಪಿತೃಕಾರ್ಯಾಭ್ಯಾಂ ನ ಪ್ರಮದಿತವ್ಯಂ । ಮಾತೃದೇವೋ ಭವ ।
ಪಿತೃದೇವೋ ಭವ । ಆಚಾರ್ಯದೇವೋ ಭವ । ಅತಿಥಿದೇವೋ
ಭವ । ಯಾನ್ಯನವದ್ಯಾನಿ ಕರ್ಮಾಣಿ । ತಾನಿ ಸೇವಿತವ್ಯಾನಿ ।
ನೋ ಇತರಾಣಿ । ಯಾನ್ಯಸ್ಮಾಕಗ್ಂ ಸುಚರಿತಾನಿ । ತಾನಿ
ತ್ವಯೋಪಾಸ್ಯಾನಿ । ನೋ ಇತರಾಣಿ । ಯೇ ಕೇ ಚಾಸ್ಮ-
ಚ್ಛ್ರೇಯಾಗ್ಂಸೋ ಬ್ರಾಹ್ಮಣಾಃ ! ತೇಷಾಂ ತ್ವಯಾಸನೇನ
ಪ್ರಶ್ವಸಿತವ್ಯಂ । ಶ್ರದ್ಧಯಾ ದೇಯಂ । ಅಶ್ರದ್ಧಯಾಽದೇಯಂ ।
ಶ್ರಿಯಾ ದೇಯಂ । ಹ್ರಿಯಾ ದೇಯಂ । ಭಿಯಾ ದೇಯಂ ।
ಸಂವಿದಾ ದೇಯಂ । ಅಥ ಯದಿ ತೇ ಕರ್ಮವಿಚಿಕಿತ್ಸಾ ವಾ ವೃತ್ತ
ವಿಚಿಕಿತ್ಸಾ ವಾ ಸ್ಯಾತ್ । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ ।
ಯುಕ್ತಾ ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಸ್ಸ್ಯುಃ । ಯಥಾ
ತೇ ತತ್ರ ವರ್ತೇರನ್ । ತಥಾ ತತ್ರ ವರ್ತೇಥಾಃ । ಅಥಾಭ್ಯಾಖ್ಯಾ
ತೇಷು । ಯೇ ತತ್ರ ಬ್ರಾಹ್ಮಣಾಃ ಸಂಮರ್ಶಿನಃ । ಯುಕ್ತಾ
ಆಯುಕ್ತಾಃ । ಅಲೂಕ್ಷಾ ಧರ್ಮಕಾಮಾಸ್ಸ್ಯುಃ । ಯಥಾ ತೇ
ತೇಷು ವರ್ತೇರನ್ । ತಥಾ ತೇಷು ವರ್ತೇಥಾಃ । ಏಷ ಆದೇಶಃ ।
ಏಷ ಉಪದೇಶಃ । ಏಷಾ ವೇದೋಪನಿಷತ್ । ಏತದನುಶಾಸನಂ ।
ಏವಮುಪಾಸಿತವ್ಯಂ । ಏವಮು ಚೈತದುಪಾಸ್ಯಂ ॥೧೧॥

ಆಚಾರ್ಯನು ವೇದಶಾಸ್ತ್ರಗಳನ್ನು ಹೇಳಿಕೊಟ್ಟನಂತರ ಶಿಷ್ಯರಿಗೆ ಹೀಗೆ ಆಜ್ಞೆಗಳನ್ನು ಮಾಡುತ್ತಾನೆ. ಯಾವಾಗಲೂ ಸತ್ಯವನ್ನೇ ಹೇಳಿ, ಧರ್ಮ ಮಾರ್ಗದಲ್ಲಿ ನಡೆಯಿರಿ, ವೇದಾಭ್ಯಾಸವನ್ನು ಉಪೇಕ್ಷೆಮಾಡಬೇಡಿ, ಆಚಾರ್ಯ ರಿಗೆ ಅವರು ಅಪೇಕ್ಷಿಸಿದ ಗುರುಶುಲ್ಕವಿತ್ತತರುವಾಯ ಅವರ ಸಂಪರ್ಕವನ್ನು ಮೊಟಕುಗೊಳಿಸಬೇಡಿ, ಸತ್ಯದ ವಿಚಾರದಲ್ಲಿ ಉದಾಸೀನರಾಗಿರಬೇಡಿ. ನಿಮ್ಮ

ಧರ್ಮಕಾರ್ಯಗಳಲ್ಲಿ ಉದಾಸೀನರಾಗಿರಬೇಡಿ, ನಿಮ್ಮ ಕುಶಲಕಾರ್ಯಗಳಲ್ಲಿ ಉದಾಸೀನರಾಗಿರಬೇಡಿ, ಮಂಗಳಯುಕ್ತವಾದ ಕಾರ್ಯಗಳಲ್ಲಿ ಉದಾಸೀನ ರಾಗಿರಬೇಡಿ. ವೇದಪ್ರವಚನಗಳಲ್ಲಿ ಉದಾಸೀನರಾಗಿರಬೇಡಿ, ದೇವಪಿತೃ ಕಾರ್ಯಗಳಲ್ಲಿ ಉದಾಸೀನರಾಗಿರಬೇಡಿ, ತಾಯಿಯೇ ನಿಮಗೆ ದೇವರಾಗಲಿ, ತಂದೆಯೂ ನಿಮಗೆ ದೇವರಾಗಲಿ, ಆಚಾರ್ಯರು ನಿಮಗೆ ದೇವರಾಗಲಿ, ಅತಿಥಿಗಳೂ ನಿಮಗೆ ದೇವರಾಗಿರಲಿ, ಯಾವ ಕರ್ಮಗಳು ಅನಿಂದಿತವೋ ಅವುಗಳನ್ನು ಮಾತ್ರ ಮಾಡಿ ಉಳಿದವುಗಳನ್ನು ಮಾಡಬೇಡಿ, ನಮ್ಮಲ್ಲಿ ಯಾವ ಒಳ್ಳೆಯ ನಡತೆಗಳಿವೆಯೋ ಅವುಗಳನ್ನೇ ಆಚರಿಸಿರಿ. ಉಳಿದವುಗ ಳನ್ನು ಸೇವಿಸಬೇಡಿ, ನಮಗಿಂತ ಉತ್ತಮವಾದ ಯಾವ ಬ್ರಾಹ್ಮಣರಿರು ವರೋ ಅವರನ್ನು ಆಸನಾದಿಗಳ ಪೂರ್ವಕ ಸತ್ಕರಿಸಿರಿ, ಶ್ರದ್ಧೆಯಿಂದ ದಾನ ಮಾಡಿರಿ, ಅಶ್ರದ್ಧೆಯಿಂದ ಕೊಡಬೇಡಿ, ನಿಮ್ಮ ಐಶ್ವರ್ಯಕ್ಕೆ ತಕ್ಕಂತೆ ಕೊಡಿ. ವಿನಯದಿಂದ ಕೊಡಿ, ಭಯದಿಂದ ಕೊಡಿ, ಮಿತ್ರಭಾವದಿಂದ ಕೊಡಿ, ಇನ್ನು ನಿಮಗೆ ಶ್ರೌತ ಸ್ಮಾರ್ತ ಕರ್ಮ ವಿಷಯದಲ್ಲಾಗಲೀ ಆಚಾರ ವಿಷಯದಲ್ಲಾ ಗಲೀ ಸಂಶಯ ಉಂಟಾದರೆ ಅಲ್ಲಿ ವಿಚಾರಶೀಲರೂ. ಕರ್ಮಗಳಲ್ಲಿ ಸಮ ರ್ಥರೂ, ಅಕ್ರೂರರೂ, ಕಾಮನೆ ಇಲ್ಲದವರೂ ಆದ ಬ್ರಾಹ್ಮಣರು ಹೇಗೆ ವರ್ತಿಸುವರೋ ಹಾಗೆ ವರ್ತಿಸಿ. ಇನ್ನು ದೋಷ ಹೊರಿಸಲ್ಪಟ್ಟವರ ವಿಷ ಯದಲ್ಲಿ ವಿಚಾರಕ್ಷಮರೂ, ಕರ್ಮಗಳಲ್ಲಿ ಸಮರ್ಥರೂ, ಅಕ್ರೂರರೂ, ಕಾಮನೆ ಇಲ್ಲದವರೂ ಆದ ಬ್ರಾಹ್ಮಣರು ಹೇಗೆ ಅವರಲ್ಲಿ ವರ್ತಿಸುವರೋ ಹಾಗೆಯೇ ನೀವೂ ವರ್ತಿಸಿರಿ. ಇದು ವಿಧಿ, ಇದು ಉಪದೇಶ, ಇದು ವೇದ ರಹಸ್ಯ, ಇದು ಈಶ್ವರಾಜ್ಞೆ, ಹೀಗೆ ಉಪಾಸಿಸಬೇಕು. ಹೀಗೆ ಇದು ಅನುಷ್ಠೇಯವು.

ದ್ವಾದಶೋಽನುವಾಕಃ

ಶಂ ನೋ ಮಿತ್ರಃ ಶಂ ವರುಣಃ । ಶಂ ನೋ ಭವತ್ವರ್ಯಮಾ । ಶಂ ನ ಇಂದ್ರೋ ಬೃಹಸ್ಪತಿಃ । ಶಂ ನೋ ವಿಷ್ಣುರುರುಕ್ರಮಃ । ನಮೋ ಬ್ರಹ್ಮಣೇ । ನಮಸ್ತೇ ವಾಯೋ । ತ್ವಮೇವ ಪ್ರತ್ಯಕ್ಷಂ

**ಬ್ರಹ್ಮಾಸಿ । ತ್ವಾಮೇವ ಪ್ರತ್ಯಕ್ಷಂ ಬ್ರಹ್ಮಾವಾದಿಷಂ । ಋತಮವಾದಿಷಂ । ಸತ್ಯಮವಾದಿಷಂ । ತನ್ಮಾಮಾವೀತ್ । ತದ್ವಕ್ತಾರಮಾವೀತ್ । ಆವೀನ್ಮಾಂ । ಆವೀದ್ವಕ್ತಾರಮ್ ॥೧೨॥**

**ಓಂ ಶಾಂತಿಃ ಶಾಂತಿಃ ಶಾಂತಿಃ**

ಮಿತ್ರನು ನಮಗೆ ಸುಖವನ್ನುಂಟುಮಾಡಲಿ. ವರುಣನು ನಮಗೆ ಸುಖವನ್ನುಂಟುಮಾಡಲಿ, ಅರ್ಯಮನು ನಮಗೆ ಸುಖವನ್ನುಂಟುಮಾಡಲಿ, ಇಂದ್ರನೂ ಬೃಹಸ್ಪತಿಯೂ ನಮಗೆ ಸುಖವನ್ನುಂಟುಮಾಡಲಿ, ಉರುಕ್ರಮನಾದ ವಿಷ್ಣುವು ನಮಗೆ ಸುಖವನ್ನುಂಟುಮಾಡಲಿ. ಬ್ರಹ್ಮನಿಗೆ ನಮಸ್ಕಾರಗಳು, ಹೇ ವಾಯುವೇ ನಿನಗೆ ನಮಸ್ಕಾರ, ನೀನೇ ಪ್ರತ್ಯಕ್ಷ ಬ್ರಹ್ಮನಾಗಿರುತ್ತೀಯೆ. ನೀನೇ ಪ್ರತ್ಯಕ್ಷ ಬ್ರಹ್ಮನೆಂದು ಹೇಳಿದ್ದೇನೆ. ಋತುವೆಂದು ಹೇಳಿದ್ದೇನೆ, ಸತ್ಯವೆಂದು ಹೇಳಿದ್ದೇನೆ. ಅದು ನನ್ನನ್ನು ಕಾಪಾಡಿತು, ಅದು ಆಚಾರ್ಯನನ್ನು ಕಾಪಾಡಿತು, ನನ್ನನ್ನು ಕಾಪಾಡಿತು. ಆಚಾರ್ಯರನ್ನು ಕಾಪಾಡಿತು. ಓಂ ಶಾಂತಿಃ ಶಾಂತಿಃ ಶಾಂತಿಃ.

---

## ಬ್ರಹ್ಮಾನಂದವಲ್ಲಿ

### ಪ್ರಥಮೋನುವಾಕಃ

**ಹರಿಃ ಓಂ । ಸಹ ನಾವವತು । ಸಹನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು । ಮಾ ವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಹರಿಃ ಓಂ ಪರಮೇಶ್ವರನು ನಮ್ಮಿಬ್ಬರನ್ನೂ ಜೊತೆಯಲ್ಲಿ ಕಾಪಾಡಲಿ ನಮ್ಮಿಬ್ಬರನ್ನೂ ಜೊತೆಯಲ್ಲಿ ಪೋಷಿಸಲಿ, ನಾವು ಜೊತೆಯಲ್ಲಿ ಸಾಮರ್ಥ್ಯವನ್ನುಂಟುಮಾಡುವಂತಾಗಲಿ, ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ. ನಾವು ಪರಸ್ಪರ ದ್ವೇಷಮಾಡದೆ ಇರುವಂತಾಗಲಿ,

ಓಂ ॥ ಬ್ರಹ್ಮವಿದಾಪ್ನೋತಿ ಪರಮ್ । ತದೇಷಾಭ್ಯುಕ್ತಾ । ಸತ್ಯಂ ಜ್ಞಾನಮನಂತಂ ಬ್ರಹ್ಮ । ಯೋವೇದ ನಿಹಿತಂ ಗುಹಾಯಾಂ ಪರಮೇ ವ್ಯೋಮನ್ । ಸೋಽಶ್ನುತೇ ಸರ್ವಾನ್ ಕಾಮಾನ್ತ್ಸಹ । ಬ್ರಹ್ಮಣಾ ವಿಪಶ್ಚಿತೇತಿ । ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ । ಆಕಾಶಾದ್ವಾಯುಃ । ವಾಯೋರಗ್ನಿಃ । ಅಗ್ನೇರಾಪಃ । ಅದ್ಭ್ಯಃ ಪೃಥಿವೀ । ಪೃಥಿವ್ಯಾ ಓಷಧಯಃ । ಓಷಧೀಭ್ಯೋಽನ್ನಂ, ಅನ್ನಾತ್ ಪುರುಷಃ । ಸವಾ ಏಷ ಪುರುಷೋಽನ್ನರಸಮಯಃ । ತಸ್ಯೇದಮೇವ ಶಿರಃ । ಅಯಂ ದಕ್ಷಿಣಃ ಪಕ್ಷಃ । ಅಯಮುತ್ತರಃ ಪಕ್ಷಃ । ಅಯಮಾತ್ಮಾ । ಇದಂ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥೧॥

ಓಂ ಬ್ರಹ್ಮನನ್ನು ತಿಳಿದವರು ಬ್ರಹ್ಮನನ್ನು ಸೇರುತ್ತಾರೆ. ಪುರಾತನ ತತ್ವವು ಹೇಳುವಂತೆ ಬ್ರಹ್ಮನೇ ಸತ್ಯ, ಬ್ರಹ್ಮನೇ ಜ್ಞಾನ, ಬ್ರಹ್ಮನೇ ಅನಂತ, ಆತನು ಹೃದಯಾಂತರಾಳದಲ್ಲಿ ವಾಸಿಸುತ್ತಿದ್ದಾನೆ, ಯಾರು ಇದನ್ನರಿವರೋ ಅವರು ಸರ್ವಜ್ಞಸ್ವರೂಪವಾದ ಬ್ರಹ್ಮವಾಗಿ ಎಲ್ಲ ಕಾಮಗಳನ್ನೂ ಒಟ್ಟಿಗೆ ಹೊಂದುತ್ತಾರೆ, ಆತ್ಮ ಪ್ರಾಣ ಇವೆರಡರ ಪೈಕಿ ಆತ್ಮನಿಂದ ಆಕಾಶವು ಉತ್ಪನ್ನವಾಯಿತು, ಆಕಾಶದಿಂದ ವಾಯುವೂ, ವಾಯುವಿನಿಂದ ಅಗ್ನಿಯೂ, ಅಗ್ನಿಯಿಂದ ಜಲವೂ, ಜಲದಿಂದ ಭೂಮಿಯೂ, ಭೂಮಿಯಿಂದ ಸಸ್ಯಗಳೂ, ಸಸ್ಯಗಳಿಂದ ಅನ್ನ, ಅನ್ನದಿಂದ ಮನುಷ್ಯನು ಉತ್ಪತ್ತಿಯಾದನು. ಪುರುಷನು ಅನ್ನಮಯನಾದನು. ಅವನಿಗೆ ಇದೇ ತಲೆ, ಇದು ದಕ್ಷಿಣಭಾಗ, ಇದು ಉತ್ತರಭಾಗ, ಇದು ಆತ್ಮ, ಇದು ಪುಚ್ಛ ಮತ್ತು ಪ್ರತಿಷ್ಠೆ, ಆ ವಿಷಯದಲ್ಲಿ ಈ ಮಂತ್ರವಿರುವುದು.

ದ್ವಿತೀಯಾನುವಾಕಃ

ಅನ್ನಾದ್ವೈ ಪ್ರಜಾಃ ಪ್ರಜಾಯಂತೇ । ಯಾಃ ಕಾಶ್ಚ ಪೃಥಿವೀಗ್ಂ ಶ್ರಿತಾಃ । ಅಥೋ ಅನ್ನೇನೈವ ಜೀವಂತಿ । ಅಥೈನದಪಿ

**ಯಂತ್ಯಂತತಃ ।ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ ಸರ್ವೌಷಧಮುಚ್ಯತೇ । ಸರ್ವಂ ವೈ ತೇಽನ್ನ ಮಾಪ್ನುವಂತಿ । ಯೇಽನ್ನಂ ಬ್ರಹ್ಮೋಪಾಸತೇ । ಅನ್ನಗ್ಂ ಹಿ ಭೂತಾನಾಂ ಜ್ಯೇಷ್ಠಂ । ತಸ್ಮಾತ್ ಸರ್ವೌಷಧಮುಚ್ಯತೇ । ಅನ್ನಾದ್ಭೂತಾನಿ ಜಾಯಂತೇ । ಜಾತಾನ್ಯನ್ನೇನ ವರ್ಧಂತೇ । ಅದ್ಯತೇತ್ತಿ ಚ ಭೂತಾನಿ । ತಸ್ಮಾದನ್ನಂ ತದುಚ್ಯತ ಇತಿ । ತಸ್ಮಾದ್ವಾ ಏತಸ್ಮಾ ದನ್ನರಸಮಯಾತ್ । ಅನ್ಯೋಽಂತರ ಆತ್ಮಾ ಪ್ರಾಣಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಂ । ಅನ್ವಯಂ ಪುರುಷ ವಿಧಃ । ತಸ್ಯ ಪ್ರಾಣ ಏವ ಶಿರಃ । ವ್ಯಾನೋ ದಕ್ಷಿಣಃ ಪಕ್ಷಃ । ಅಪಾನ ಉತ್ತರಃ ಪಕ್ಷಃ । ಆಕಾಶ ಆತ್ಮಾ । ಪೃಥಿವೀ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥೨॥**

ಭೂಮಿಯಲ್ಲಿ ಜನಿಸಿರುವ ಎಲ್ಲಾ ಜೀವಗಳೂ ಅನ್ನದಿಂದಲೇ ಜನಿಸಿ ದುವು. ಇನ್ನು ಮುಂದೂ ಅವು ಅನ್ನದಿಂದಲೇ ಬದುಕಬೇಕಾಗಿದೆ ಮತ್ತು ಕೊನೆಯಲ್ಲಿ ಆಹಾರಕ್ಕೇ ಜನ್ಮ ತಳೆಯಲು ಮರಳಬೇಕಾಗಿದೆ. ಅನ್ನವೇ ಪ್ರಾಣಿಗಳಲ್ಲಿ ಜ್ಯೇಷ್ಠನಲ್ಲವೇ ಆದುದರಿಂದ ಅನ್ನವು ಸರ್ವೌಷಧವೆಂದು ಹೇಳಲ್ಪಟ್ಟಿದೆ. ಯಾರು ಅನ್ನವನ್ನು ಬ್ರಹ್ಮನೆಂದು ಪೂಜಿಸುವರೋ ಅವರು ಅನ್ನದ ಮೇಲೆ ಯಜಮಾನರಾಗುತ್ತಾರೆ. ಏಕೆಂದರೆ ಅನ್ನವು ಭೂತಗಳ ಲ್ಲೆಲ್ಲಾ ಶ್ರೇಷ್ಠವಾಗಿದ್ದು ಸರ್ವೌಷಧವೆನ್ನಿಸಿಕೊಂಡಿರುತ್ತದೆ ಅನ್ನದಿಂದಲೇ ಎಲ್ಲಾ ಜೀವಿಗಳೂ ಹುಟ್ಟುತ್ತವೆ ಮತ್ತು ಅನ್ನದಿಂದಲೇ ಅಭಿವೃದ್ಧಿಯನ್ನು ಹೊಂದುತ್ತವೆ. ಅದು ತಿನ್ನಲ್ಪಡುತ್ತದೆ ಮತ್ತು ತಿನ್ನುತ್ತದೆ ಅನ್ನವನ್ನು ತಿನ್ನುವ ಜೀವಿಗಳನ್ನೆಲ್ಲಾ ಅದೇ ನುಂಗಿಬಿಡುತ್ತದೆ. ಅದಕ್ಕೇ ಅನ್ನವನ್ನು ಅನ್ನರಸಮಯ ಎನ್ನುವುದು. ಅಂತಹ ಈ ಅನ್ನರಸಮಯನಾದ ಆತ್ಮನಿ ಗಿಂತ ಬೇರೆಯವನೂ, ಒಳಗಿರುವನೂ, ಪ್ರಾಣಮಯನೂ ಆಗಿರುವ ಆತ್ಮ ನಿರುವನು. ಪ್ರಾಣಮಯನಾದ ಆತ್ಮನಿಂದ ಈ ಅನ್ನರಸಮಯನಾದ ಆತ್ಮನು ತುಂಬಿರುವನು. ಇವನು ಪುರುಷಾಕಾರನಾಗಿಯೇ ಇರುವನು. ಆ ಅನ್ನಮಯ ಪುರುಷಾಕಾರವನ್ನನುಸರಿಸಿ ಇವನು ಪುರುಷಾಕಾರನಾಗಿರುತ್ತಾನೆ. ಅವನಿಗೆ

ಪ್ರಾಣವೇ ತಲೆ ವ್ಯಾನವು, ದಕ್ಷಿಣಭಾಗ, ಅಪಾನವು ಉತ್ತರಭಾಗ, ಸಮಾನವು ದೇಹದ ಮಧ್ಯಭಾಗ, ಪೃಥ್ವೀದೇವತೆಯು ಪುಚ್ಛ ಮತ್ತು ಪ್ರತಿಷ್ಠೆ, ಆ ವಿಷಯದಲ್ಲಿ ಈ ಶ್ಲೋಕವಿರುವುದು.

ತೃತೀಯಾನುವಾಕಃ

ಪ್ರಾಣಂ ದೇವಾ ಅನುಪ್ರಾಣಂತಿ । ಮನುಷ್ಯಾಃ ಪಶವಶ್ಚ ಯೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷ ಮುಚ್ಯತೇ । ಸರ್ವಮೇವ ತ ಆಯುರ್ಯಂತಿ । ಯೇ ಪ್ರಾಣಂ ಬ್ರಹ್ಮೋಪಾಸತೇ । ಪ್ರಾಣೋ ಹಿ ಭೂತಾನಾಮಾಯುಃ । ತಸ್ಮಾತ್ ಸರ್ವಾಯುಷ ಮುಚ್ಯತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾತ್ ಪ್ರಾಣ ಮಯಾತ್ । ಅನ್ಯೋಽಂತರ ಆತ್ಮಾ ಮನೋಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಂ । ಅನ್ವಯಂ ಪುರುಷ ವಿಧಃ । ತಸ್ಯ ಯಜುರೇವ ಶಿರಃ । ಋಕ್ ದಕ್ಷಿಣಃ ಪಕ್ಷಃ । ಸಾಮೋತ್ತರಃ ಪಕ್ಷಃ । ಆದೇಶ ಆತ್ಮಾ । ಅಥರ್ವಾಂಗಿರಸಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥ ೩॥

ದೇವತೆಗಳು ಪ್ರಾಣನ ಆಧಿಪತ್ಯದಲ್ಲಿ ವಾಸಿಸುತ್ತ ಜೀವಂತರಾಗಿದ್ದಾರೆ. ಹಾಗೆಯೇ ಮನುಷ್ಯರೂ, ಇತರ ಪ್ರಾಣಿಗಳೂ ಜೀವಿಸಿರುವುವು ಆದುದರಿಂದ ಪ್ರಾಣವೇ ಎಲ್ಲರ ಆಯುಸ್ಸು. ಯಾರು ಪ್ರಾಣನನ್ನು ಬ್ರಹ್ಮನೆಂದು ಉಪಾಸಿಸುವರೋ ಅವರು ಪೂರ್ಣಾಯುಸ್ಸನ್ನು ಹೊಂದುತ್ತಾರೆ. ಪ್ರಾಣವೇ ಪ್ರಾಣಿಗಳ ಆಯುಸ್ಸು. ಆದುದರಿಂದ ಪ್ರಾಣವು ಎಲ್ಲರ ಆಯುಸ್ಸು ಎಂದು ಹೇಳಲ್ಪಟ್ಟಿದೆ. ಆ ಹಿಂದಿನ ಅನ್ನಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೋ ಅವನೇ ಇವನು ಅಂತಹ ಈ ಪ್ರಾಣಮಯನಾದ ಆತ್ಮನಿಗಿಂತ ಬೇರೆಯವನೂ ಒಳಗಿರುವವನೂ, ಮನೋಮಯನೂ ಆದ ಆತ್ಮನಿರುವನು.

ಮನೋಮಯನಾದ ಆತ್ಮನು ತುಂಬಿರುವನು. ಆ ಇವನು ಪುರುಷಾಕಾರನಾಗಿಯೇ ಇರುವನು. ಆ ಪ್ರಾಣಮಯನ ಪುರುಷಾಕಾರವನ್ನು ಅನುಸರಿಸಿ ಇವನು ಪುರುಷಾಕಾರನಾಗಿರುತ್ತಾನೆ. ಅವನಿಗೆ ಯಜುರ್ವೇದವೇ ತಲೆ, ಋಗ್ವೇದವು ದಕ್ಷಿಣಪಕ್ಷ, ಸಾಮವೇದವು ಉತ್ತರದಭಾಗ, ಆತ್ಮನ ಆದೇಶವು ಮಧ್ಯಭಾಗ, ಅಥರ್ವಣ ವೇದವು ಪುಚ್ಛ ಮತ್ತು ಪ್ರತಿಷ್ಠೆ. ಆ ವಿಷಯದಲ್ಲಿ ಈ ಶ್ಲೋಕವಿರುವುದು.

## ಚತುರ್ಥೋಽನುವಾಕಃ

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕದಾಚಿನೇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾನ್ಮನೋಮಯಾತ್ । ಅನ್ಯೋಽಂತರ ಆತ್ಮಾ ವಿಜ್ಞಾನಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷವಿಧ ಏವ । ತಸ್ಯ ಪುರುಷ ವಿಧತಾಂ । ಅನ್ವಯಂ ಪುರುಷ ವಿಧಃ । ತಸ್ಯ ಶ್ರದ್ಧೈವ ಶಿರಃ । ಋತಂ ದಕ್ಷಿಣಃ ಪಕ್ಷಃ । ಸತ್ಯಮುತ್ತರಃ ಪಕ್ಷಃ । ಯೋಗ ಆತ್ಮಾ । ಮಹಃ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥೪॥**

ಕೆಲವು ವೇಳೆ ವಾಕ್ಕುಗಳು ಮನಸ್ಸಿನಮೇಲೆ ಬೀಳದೆಯೇ ಹತಾಶರಾಗಿ ಹಿಂದಿರುಗುವುದೊಂದು ಬ್ರಹ್ಮನ ಲೀಲೆಯಾಗಿದೆ. ಆ ಬ್ರಹ್ಮನ ಆನಂದವನ್ನು ಕಂಡವರಾರು ? ವಿದ್ವಾಂಸರಿಗೂ ಸಾಧ್ಯವಿಲ್ಲ. ಆ ಹಿಂದಿನ ಪ್ರಾಣಮಯನಿಗೆ ಯಾವನು ಶರೀರದಲ್ಲಿನ ಆತ್ಮನೋ ಅವನು ಇವನೇ. ಅಂತಹ ಈ ಮನೋಮಯನಾದ ಆತ್ಮನಿಗಿಂತ ಬೇರೆಯವನೂ, ಒಳಗಿರುವವನೂ, ವಿಜ್ಞಾನಮಯನೂ, ಆದ ಆತ್ಮನಿರುವನು. ವಿಜ್ಞಾನಮಯನಾದ ಆತ್ಮನಿಂದ ಈ ಮನೋಮಯನಾದ ಆತ್ಮನು ತುಂಬಿರುವನು. ಆ ಇವನು ಪುರುಷಾಕಾರನಾಗಿಯೇ ಇರುವನು. ಆ ಮನೋಮಯನ ಪುರುಷಾಕಾರವನ್ನು ಅನುಸರಿಸಿ ಇವನು ಪುರುಷಾಕಾರನಾಗಿರುತ್ತಾನೆ, ಅವನಿಗೆ ಶ್ರದ್ಧೆಯೇ ತಲೆ, ಋತವೇ

ದಕ್ಷಿಣಭಾಗ, ಸತ್ಯವೇ ಅವನ ಉತ್ತರದ ಭಾಗ, ಯೋಗವು ಮಧ್ಯದ ಭಾಗ. ಮಹತ್ತತ್ತ್ವವು ಪುಚ್ಛ ಮತ್ತು ಪ್ರತಿಷ್ಠೆ. ಆ ವಿಷಯದಲ್ಲಿ ಈ ಶ್ಲೋಕ ವಿರುತ್ತದೆ.

ಪಂಚಮೋನುವಾಕಃ

**ವಿಜ್ಞಾನಂ ಯಜ್ಞಂ ತನುತೇ । ಕರ್ಮಾಣಿ ತನುತೇಽಪಿ ಚ । ವಿಜ್ಞಾನಂ ದೇವಾಃ ಸರ್ವೇ । ಬ್ರಹ್ಮ ಜ್ಯೇಷ್ಠಮುಪಾಸತೇ । ವಿಜ್ಞಾನಂ ಬ್ರಹ್ಮಚೇದ್ವೇದ । ತಸ್ಮಾಚ್ಚೇನ್ನ ಪ್ರಮಾದ್ಯತಿ । ಶರೀರೇ ಪಾಪ್ಮನೋ ಹಿತ್ವಾ । ಸರ್ವಾನ್ ಕಾಮಾನ್ ಸಮಶ್ನುತ ಇತಿ । ತಸ್ಯೈಷ ಏವ ಶಾರೀರ ಆತ್ಮಾ । ಯಃ ಪೂರ್ವಸ್ಯ । ತಸ್ಮಾದ್ವಾ ಏತಸ್ಮಾದ್ವಿಜ್ಞಾನ ಮಯಾತ್ । ಅನ್ಯೋಽಂತರ ಆತ್ಮಾಽಽನಂದಮಯಃ । ತೇನೈಷ ಪೂರ್ಣಃ । ಸ ವಾ ಏಷ ಪುರುಷ ವಿಧ ಏವ । ತಸ್ಯ ಪುರುಷವಿಧತಾಂ । ಅನ್ವಯಂ ಪುರುಷ ವಿಧಃ । ತಸ್ಯ ಪ್ರಿಯಮೇವ ಶಿರಃ । ಮೋದೋ ದಕ್ಷಿಣಃ ಪಕ್ಷಃ । ಪ್ರಮೋದ ಉತ್ತರಃ ಪಕ್ಷಃ । ಆನಂದ ಆತ್ಮಾ । ಬ್ರಹ್ಮ ಪುಚ್ಛಂ ಪ್ರತಿಷ್ಠಾ । ತದಪ್ಯೇಷ ಶ್ಲೋಕೋ ಭವತಿ ॥೫॥**

ವಿಜ್ಞಾನವು ಯಜ್ಞಕ್ರತುಗಳನ್ನು ವಿಸ್ತರಿಸುತ್ತದೆ. ಅದು ಕರ್ಮದ ಅವಶ್ಯಕತೆಯನ್ನೂ ಅರುಹುತ್ತದೆ. ದೇವತೆಗಳು ಕೂಡ ವಿಜ್ಞಾನವನ್ನು ಜ್ಯೇಷ್ಠನಾದ ಬ್ರಹ್ಮನೆಂದು ಪೂಜಿಸುತ್ತಾರೆ. ಯಾವನಾದರೂ ವಿಜ್ಞಾನ ವನ್ನು ಬ್ರಹ್ಮನೆಂದು ಅರಿತುಕೊಂಡರೆ ಆ ವಿಜ್ಞಾನಮಯಬ್ರಹ್ಮದ ವಿಷಯ ದಲ್ಲಿ ಪ್ರಮಾದವನ್ನು ಮಾಡದಿದ್ದರೆ ಅವನು ಶರೀರದಲ್ಲಿ ಪಾಪಗಳನ್ನು ಬಿಟ್ಟು ಎಲ್ಲ ಕಾಮಗಳನ್ನು ಹೊಂದುತ್ತಾನೆ. ಆ ಹಿಂದಿನ ಮನೋಮಯ ನಿಗೆ ಯಾವನು ಶರೀರದಲ್ಲಿರುವ ಆತ್ಮನೋ ಅವನು ಇವನೇ. ಅಂತಹ ಈ ವಿಜ್ಞಾನಮಯನಾದ ಆತ್ಮನಿಗಿಂತ ಬೇರೆಯವನೂ, ಒಳಗಿರುವವನೂ, ಆನಂದಮಯನೂ ಆದ ಆತ್ಮನಿರುವನು. ಆನಂದಮಯನಾದ ಆತ್ಮನಿಂದ ಈ

ವಿಜ್ಞಾನಮಯನಾದ ಆತ್ಮನು ತುಂಬಿರುವನು. ಆ ಇವನು ಪುರುಷಾಕಾರನಾಗಿಯೇ ಇರುವನು. ಆ ವಿಜ್ಞಾನಮಯನ ಪುರುಷಾಕಾರವನ್ನು ಅನುಸರಿಸಿ ಇವನೂ ಪುರುಷಾಕಾರನಾಗಿರುತ್ತಾನೆ ಆವನಿಗೆ ಪ್ರಿಯವೆಂಬುದೇ ತಲೆ, ಮೋದವೆಂಬುದೇ ದಕ್ಷಿಣದ ಭಾಗ, ಪ್ರಮೋದವೆಂಬುದೇ ಉತ್ತರದ ಭಾಗ, ಆನಂದವು ಮಧ್ಯದ ಭಾಗ, ಬ್ರಹ್ಮವು ಪುಚ್ಛ ಮತ್ತು ಪ್ರತಿಷ್ಠೆ ಆ ವಿಷಯದಲ್ಲಿ ಈ ಶ್ಲೋಕವಿರುವುದು.

ಷಷ್ಠೋನುವಾಕಃ

ಅಸನ್ನೇವ ಸ ಭವತಿ। ಅಸದ್ ಬ್ರಹ್ಮೇತಿ ವೇದ ಚೇತ್। ಅಸ್ತಿ ಬ್ರಹ್ಮೇತಿ ಚೇದ್ವೇದ। ಸಂತಮೇನಂ ತತೋ ವಿದುರಿತಿ। ತಸ್ಯೈಷ ಏವ ಶಾರೀರ ಆತ್ಮಾ। ಯಃ ಪೂರ್ವಸ್ಯ। ಅಥಾತೋಽನು ಪ್ರಶ್ನಾಃ। ಉತಾವಿದ್ವಾನಮುಂ ಲೋಕಂ ಪ್ರೇತ್ಯ। ಕಶ್ಚನ ಗಚ್ಛತೀ೩। ಆಹೋ ವಿದ್ವಾನಮುಂ ಲೋಕಂ ಪ್ರೇತ್ಯ। ಕಶ್ಚಿತ್ ಸಮಶ್ನುತಾ ೩ ಉ। ಸೋಽಕಾಮಯತ। ಬಹುಸ್ಯಾಂ ಪ್ರಜಾಯೇಯೇತಿ। ಸ ತಪೋ ತಪ್ಯತ। ಸ ತಪಸ್ತಪ್ತ್ವಾ। ಇದಗ್ಂ ಸರ್ವಮಸೃಜತ। ಯದಿದಂ ಕಿಂಚ। ತತ್ ಸೃಷ್ಟ್ವಾ। ತದೇವಾನು ಪ್ರಾವಿಶತ್। ತದನು ಪ್ರವಿಶ್ಯ। ಸಚ್ಚ ತ್ಯಚ್ಚಾಭವತ್। ನಿರುಕ್ತಂ ಚಾನಿರುಕ್ತಂ ಚ। ನಿಲಯನಂ ಚಾನಿಲಯನಂ ಚ! ವಿಜ್ಞಾನಂ ಚಾವಿಜ್ಞಾನಂ ಚ। ಸತ್ಯಂ ಚಾನೃತಂ ಚ ಸತ್ಯಮಭವತ್। ಯದಿದಂ ಕಿಂಚ। ತತ್ ಸತ್ಯಮಿತ್ಯಾಚಕ್ಷತೇ। ತದಪ್ಯೇಷ ಶ್ಲೋಕೋ ಭವತಿ ||೬||

ಯಾರು ಬ್ರಹ್ಮನು ಅಸತ್ ಎಂದು ಭಾವಿಸುವರೋ ಆವನು ಅವರಿಗೆ ಇದ್ದಂತೆಯೇ ಅಲ್ಲ ಆದರೆ ಬ್ರಹ್ಮನು ಸತ್ ಎಂದು ಅರಿತಲ್ಲಿ ಮನುಷ್ಯರು ಜ್ಯೋತಿಗಳನ್ನು ದೇವಗಳನ್ನು ನಂಬುತ್ತಾರೆ. ಆ ಹಿಂದಿನ ವಿಜ್ಞಾನಮಯನಿಗೆ ಯಾವನು ಶರೀರದಲ್ಲಿರುವ ಆತ್ಮನೋ ಅವನೇ ಇವನು. ಆ ತರುವಾಯ ಈ

ಪ್ರಶ್ನೆಗಳು ಉದ್ಭವಿಸುತ್ತವೆ. ವಿದ್ವಾಂಸನಲ್ಲದವನು ಮುಂದಿನ ಲೋಕಕ್ಕೆ ಹೋಗುವಾಗ ಯಾವ ಲೋಕಕ್ಕೆ ಹೋಗುತ್ತಾನೆ? ಮತ್ತು ಪರಿಪೂರ್ಣ ವಿದ್ವಾಂಸನು ಪರಲೋಕಕ್ಕೆ ಹೋಗುವಾಗ ಯಾವ ಲೋಕಕ್ಕೆ ಹೋಗುತ್ತಾನೆ? ನಾನು ಬಹುವಾಗುವೆನು. ಹುಟ್ಟುವೆನು ಎಂದು ಆ ಆತ್ಮನು ಸಂಕಲ್ಪಿಸಿದನು, ಅವನು ತಪಸ್ಸನ್ನು ಮಾಡಿದನು. ಹಾಗೆ ತಪಸ್ಸನ್ನು ಮಾಡಿದಬಳಿಕ ಈ ಪ್ರಪಂಚದಲ್ಲಿರುವುದನ್ನೆಲ್ಲಾ ಸೃಷ್ಟಿಸಿದನು. ಅದನ್ನು ಸೃಷ್ಟಿಸಿ ಅದನ್ನೇ ಪ್ರವೇಶಿಸಿದನು. ಅದನ್ನು ಪ್ರವೇಶಿಸಿ ಸತ್ ಮತ್ತು ತ್ಯತ್, ನಿರುಕ್ತ ಮತ್ತು ಅನಿರುಕ್ತ, ನಿಲಯನ ಮತ್ತು ಅನಿಲಯನ, ವಿಜ್ಞಾನ ಮತ್ತು ಅವಿಜ್ಞಾನ, ಸತ್ಯ ಮತ್ತು ಅನೃತ ಇದೆಲ್ಲವೂ ಆದನು. ಇನ್ನೂ ಏನೇನಿವೆಯೋ ಅವೆಲ್ಲವೂ ಆದನು. ಆ ಬ್ರಹ್ಮವು ಸತ್ಯ ಎಂದು ಹೇಳುತ್ತಾರೆ. ಆ ವಿಷಯ ದಲ್ಲಿ ಈ ಶ್ಲೋಕವಿರುತ್ತದೆ.

## ಸಪ್ತಮೋನುವಾಕಃ

**ಅಸದ್ವಾ ಇದಮಗ್ರ ಆಸೀತ್ । ತತೋ ವೈ ಸದಜಾಯತ । ತದಾತ್ಮಾನಗ್ಂ ಸ್ವಯಮಕುರುತ । ತಸ್ಮಾತ್ ತತ್ ಸುಕೃತ ಮುಚ್ಯತ ಇತಿ । ಯದ್ವೈ ತತ್ ಸುಕೃತಂ । ರಸೋ ವೈ ಸಹ । ರಸಗ್ಂ ಹ್ಯೇವಾಯಂ ಲಬ್ಧ್ವಾನಂದೀ ಭವತಿ । ಕೋಹ್ಯೇವಾನ್ಯಾತ್ ಕಃ ಪ್ರಾಣ್ಯಾತ್ । ಯದೇಶ ಆಕಾಶ ಆನಂದೋ ನ ಸ್ಯಾತ್ । ಏಷ ಹ್ಯೇವೈಷ ಏತಸ್ಮಿನ್ನದೃಷ್ಯೇಽನಾತ್ಮ್ಯೇಽನಿರುಕ್ತೇಽನಿಲಯನೇಽ ಭಯಂ ಪ್ರತಿಷ್ಠಾಂ ವಿಂದತೇ । ಅಥ ಸೋಽಭಯಂ ಗತೋ ಭವತಿ । ಯದಾ ಹ್ಯೇವೈಷ ಏತಸ್ಮಿನ್ನುದರಮಂತರಂ ಕುರುತೇ । ಅಥ ತಸ್ಯ ಭಯಂ ಭವತಿ । ತತ್ತ್ವೇವ ಭಯಂ ವಿದುಷೋಽ ಮನ್ವಾನಸ್ಯ । ತದಪ್ಯೇಷ ಶ್ಲೋಕೋ ಭವತಿ ॥೭॥**

ಈ ಜಗತ್ತು ಸೃಷ್ಟಿಗೆ ಪೂರ್ವದಲ್ಲಿ ಅಸತ್ತೇ ಆಗಿತ್ತು. ಅದರಿಂದಲೇ ಸತ್ ಉತ್ಪನ್ನವಾಯಿತು, ಅದು ತನ್ನನ್ನು ತಾನೇ ಉತ್ಪತ್ತಿಮಾಡಿಕೊಂಡಿತು,

ಆದುದರಿಂದ ಅದು ಸುಕೃತವೆನಿಸಿಕೊಳ್ಳುತ್ತದೆ. ಆ ಸುಕೃತವೇ ರಸ, ರಸವನ್ನೇ ಹೊಂದಿ ಇವನು ಆನಂದಿಸುತ್ತಾನೆ. ಆಕಾಶವಲ್ಲಿ ಈ ಆನಂದವು ಇಲ್ಲದಿದ್ದರೆ ಯಾವನು ತಾನೆ ಪ್ರಾಣಕ್ರಿಯೆಯನ್ನಾಗಲೀ ಅಪಾನಕ್ರಿಯೆಯನ್ನಾಗಲೀ ಮಾಡಬಲ್ಲನು ? ಇವನೇ ಅಲ್ಲವೇ ಆನಂದವಡಿಸುವವನು ? ಯಾವಾಗ ಈ ಸಾಧಕನು ಈ ಅವಿಕಾರವೂ, ಅಶರೀರವೂ, ಅನಿರ್ವಾಚ್ಯವೂ, ಆಧಾರರಹಿತವೂ ಆದ ಬ್ರಹ್ಮನಲ್ಲಿ ಭಯವಿಲ್ಲದೆ ಆತ್ಮಭಾವವನ್ನು ಹೊಂದುತ್ತಾನೆಯೋ ಆಗ ಅವನು ಅಭಯವನ್ನು ಪಡೆದವನಾಗುತ್ತಾನೆ. ಯಾವಾಗ ಇವನು ಈ ಬ್ರಹ್ಮದಲ್ಲಿ ಸ್ವಲ್ಪವಾದರೂ ಭೇದದರ್ಶನವನ್ನು ಮಾಡುತ್ತಾನಯೋ ಅದರಿಂದ ಅವನಿಗೆ ಭಯವಾಗುತ್ತದೆ. ಅದೇ ಅವಿವೇಕಿಯಾದ ವಿದ್ವಾಂಸನಿಗೆ ಭಯವಾಗುತ್ತದೆ. ಆ ವಿಷಯದಲ್ಲಿ ಈ ಶ್ಲೋಕವಿರುತ್ತದೆ.

## ಅಷ್ಟಮೋಽನುವಾಕಃ

**ಭೀಷಾಽಸ್ಮಾದ್ವಾತಃ ಪವತೇ । ಭೀಷೋದೇತಿ ಸೂರ್ಯಃ । ಭೀಷಾಽಸ್ಮಾದಗ್ನಿಶ್ಚೇಂದ್ರಶ್ಚ । ಮೃತ್ಯುರ್ಧಾವತಿ ಪಂಚಮ ಇತಿ । ಸೈಷಾಽಽನಂದಸ್ಯ ಮೀಮಾಗ್ಂಸಾ ಭವತಿ । ಯುವಾ ಸ್ಯಾತ್ ಸಾಧು ಯುವಾಧ್ಯಾಯಕಃ । ಆಶಿಷ್ಠೋ ದೃಢಿಷ್ಠೋ ಬಲಿಷ್ಠಃ । ತಸ್ಯೇಯಂ ಪೃಥಿವೀ ಸರ್ವಾ ವಿತ್ತಸ್ಯ ಪೂರ್ಣಾ ಸ್ಯಾತ್ । ಸ ಏಕೋ ಮಾನುಷ ಆನಂದಃ । ತೇ ಯೇ ಶತಂ ಮಾನುಷಾ ಆನಂದಾಃ । ಸ ಏಕೋ ಮನುಷ್ಯ ಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ಮನುಷ್ಯಗಂಧರ್ವಾಣಾಮಾನಂದಾಃ । ಸ ಏಕೋ ದೇವಗಂಧರ್ವಾಣಾಮಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ದೇವಗಂಧರ್ವಾಣಾಮಾನಂದಾಃ । ಸ ಏಕಃ ಪಿತೃಣಾಂ ಚಿರಲೋಕಲೋಕಾನಾಮಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ಪಿತೃಣಾಂ ಚಿರಲೋಕಲೋಕಾನಾಮಾನಂದಾಃ । ಸ ಏಕ ಆಜಾನಜಾನಾಂ ದೇವಾನಾಮಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ ।**

ತೇ ಯೇ ಶತಮಾಜಾನಜಾನಾಂ ದೇವಾನಾಮಾನಂದಾಃ । ಸ ಏಕಃ ಕರ್ಮದೇವಾನಾಂ ದೇವಾನಾಮಾನಂದಃ । ಯೇ ಕರ್ಮಣಾ ದೇವಾನಪಿಯಂತಿ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ಕರ್ಮದೇವಾನಾಂ ದೇವಾನಾಮಾನಂದಾಃ । ಸ ಏಕೋ ದೇವಾನಾಮಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ದೇವಾನಾಮಾನಂದಾಃ । ಸ ಏಕ ಇಂದ್ರಸ್ಯಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಮಿಂದ್ರಸ್ಯಾನಂದಾಃ । ಸ ಏಕೋ ಬೃಹಸ್ಪತೇರಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ಬೃಹಸ್ಪತೇರಾನಂದಾಃ । ಸ ಏಕಃ ಪ್ರಜಾಪತೇರಾನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ತೇ ಯೇ ಶತಂ ಪ್ರಜಾಪತೇರಾನಂದಾಃ । ಸ ಏಕೋ ಬ್ರಹ್ಮಣ ಆನಂದಃ । ಶ್ರೋತ್ರಿಯಸ್ಯಾಕಾಮಹತಸ್ಯ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸ ಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪಸಂಕ್ರಾಮತಿ । ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ । ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ । ಏತಮಾನಂದಮಯಮಾತ್ಮಾನಮುಪಸಂಕ್ರಾಮತಿ । ತದಪ್ಯೇಷ ಶ್ಲೋಕೋ ಭವತಿ ॥೮॥

ಆತನ ಹೆದರಿಕೆಯಿಂದ ಗಾಳಿಯು ಬೀಸುತ್ತದೆ, ಆತನ ಹೆದರಿಕೆಯಿಂದಲೇ ಸೂರ್ಯನು ಉದಯಿಸುತ್ತಾನೆ, ಆತನ ಹೆದರಿಕೆಯಿಂದಲೇ ಇಂದ್ರ ಮತ್ತು ಅಗ್ನಿಯು ತಮ್ಮ ಕೆಲಸಗಳಲ್ಲಿ ಚುರುಕಾಗಿರುತ್ತಾರೆ, ಐದನೆಯವನಾದ ಯಮನೂ ಓಡುತ್ತಾನೆ, ಆ ಇದು ಆನಂದದ ವಿಚಾರವಾಗಿರುತ್ತದೆ. ವೇದಾಧ್ಯಯನಸಂಪನ್ನನೂ, ಅತ್ಯಂತವಾಗಿ ಆಶೆಯುಳ್ಳವನೂ, ದೃಢತಮನೂ, ಬಲಿಷ್ಠನೂ, ಐಶ್ವರ್ಯದಿಂದ ಪೂರ್ಣವಾದ ಪೃಥ್ವಿಯೆಲ್ಲವನ್ನೂ ಹೊಂದಿರುವವನೂ ಆದ ಒಬ್ಬ ಒಳ್ಳೆಯ ಯುವಕನಿರಲಿ, ಅವನ

ಆನಂದವು ಮನುಷ್ಯರ ಒಂದು ಆನಂದ. ಆ ನೂರು ಮಾನುಷ ಆನಂದಗಳು ಮನುಷ್ಯ ಗಂಧರ್ವರ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ ಮನುಷ್ಯ ಗಂಧರ್ವರ ಆ ನೂರು ಆನಂದಗಳು ದೇವಗಂಧರ್ವರ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ, ದೇವಗಂಧರ್ವರ ನೂರು ಆನಂದಗಳು ಚಿರಲೋಕವುಳ್ಳ ಪಿತೃಗಳ ಒಂದು ಆನಂದ ; ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ. ಚಿರಲೋಕವುಳ್ಳ ಪಿತೃಗಳ ಆ ನೂರು ಆನಂದಗಳು ಅಜಾನಜದೇವತೆಗಳ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ, ಅಜಾನಜದೇವತೆಗಳ ಆ ನೂರು ಆನಂದಗಳು ಕರ್ಮದೇವತೆಗಳಾದ ದೇವತೆಗಳ ಒಂದು ಆನಂದ; ಅವರು ವೈದಿಕ ಕರ್ಮದಿಂದ ದೇವತ್ವವನ್ನು ಹೊಂದಿರುತ್ತಾರೆ. ಮತ್ತು ಅದು ಅಕಾಮಹತನಾದ ಶ್ರೋತ್ರಿಯನ ಆನಂದ. ಕರ್ಮದೇವತೆಗಳ ಆ ನೂರು ಆನಂದಗಳು ದೇವತೆಗಳ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ, ದೇವತೆಗಳ ಆ ನೂರು ಆನಂದಗಳು ಇಂದ್ರನ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ, ಇಂದ್ರನ ಆ ನೂರು ಆನಂದಗಳು ಬೃಹಸ್ಪತಿಯ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ, ಬೃಹಸ್ಪತಿಯ ಆ ನೂರು ಆನಂದಗಳು ಪ್ರಜಾಪತಿಯ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ, ಪ್ರಜಾಪತಿಯ ಆ ನೂರು ಆನಂದಗಳು ಬ್ರಹ್ಮನ ಒಂದು ಆನಂದ ಮತ್ತು ಅಕಾಮಹತನಾದ ಶ್ರೋತ್ರಿಯನ ಆನಂದ.

ಯಾವ ಆ ಇವನು ಪುರುಷನಲ್ಲಿರುವನೋ ಮತ್ತು ಯಾವ ಅವನು ಆದಿತ್ಯನಲ್ಲಿರುವನೋ ಅವನು ಒಬ್ಬನೇ. ಯಾವನು ಹೀಗೆ ತಿಳಿದುಕೊಳ್ಳುವನೋ ಅವನು ಈ ಲೋಕದಿಂದ ಹೊರಟುಹೋಗಿ ಈ ಅನ್ನಮಯ ಆತ್ಮನನ್ನು ಹೊಂದುತ್ತಾನೆ, ಈ ಪ್ರಾಣಮಯವೆಂಬ ಆತ್ಮನನ್ನು ಹೊಂದುತ್ತಾನೆ, ಈ ಮನೋಮಯನೆಂಬ ಆತ್ಮನನ್ನು ಹೊಂದುತ್ತಾನೆ, ಈ ವಿಜ್ಞಾನಮಯನೆಂಬ ಆತ್ಮನನ್ನು ಹೊಂದುತ್ತಾನೆ, ಈ ಆನಂದಮಯನೆಂಬ ಆತ್ಮನನ್ನು ಹೊಂದುತ್ತಾನೆ. ಆ ವಿಷಯದಲ್ಲಿ ಈ ಶ್ಲೋಕವಿರುತ್ತದೆ.

ನವಮೋಽನುವಾಕಃ

**ಯತೋ ವಾಚೋ ನಿವರ್ತಂತೇ । ಅಪ್ರಾಪ್ಯ ಮನಸಾ ಸಹ । ಆನಂದಂ ಬ್ರಹ್ಮಣೋ ವಿದ್ವಾನ್ । ನ ಬಿಭೇತಿ ಕುತಶ್ಚನೇತಿ । ಏತಗ್ಂ ಹ ವಾವ ನ ತಪತಿ । ಕಿಮಹಗ್ಂ ಸಾಧು ನಾಕರವಂ । ಕಿಮಹಂ ಪಾಪಮಕರವಮಿತಿ । ಸ ಯ ಏವಂ ವಿದ್ವಾನೇತೇ ಆತ್ಮಾನಗ್ಗ್ ಸ್ಪೃಣುತೇ । ಉಭೇ ಹ್ಯೇವೈಷ ಏತೇ ಆತ್ಮಾನಗ್ಗ್ ಸ್ಪೃಣುತೇ । ಯ ಏವಂ ವೇದ । ಇತ್ಯುಪನಿಷತ್ ॥ ॥೯॥**

ಬ್ರಹ್ಮಾನಂದದ ಮುಂದೆ ವಾಕ್ಕುಗಳು ಕೆಲಸಕ್ಕೆ ಬಾರದೆ ಹಿಂತಿರುಗುತ್ತವೆ. ಮನಸ್ಸೂ ಕೂಡ ಅಲ್ಲಿ ನಿಲ್ಲಲಾರದೆ ಗಾಭರಿಯಿಂದ ಹಿಂದಿರುಗುತ್ತದೆ, ಬ್ರಹ್ಮಾನಂದವನ್ನು ಬಲ್ಲವರಾರು ? ಆತನು ಈ ಪ್ರಪಂಚ ಅಥವಾ ಬೇರೆಲ್ಲಿಯ ವಿಚಾರಗಳಿಗೂ ಹೆದರುವನಲ್ಲ. ಆತನಿಗೆ ಮನಸ್ತಾಪವೂ ಇಲ್ಲ, ಸಂಕಟವೂ ಇಲ್ಲ ನಾನೇಕೆ ಒಳ್ಳೆಯದನ್ನು ಮಾಡಲಿಲ್ಲ ? ನಾನು ಪಾಪವನ್ನು ಏಕೆ ಮಾಡಿದೆನು, ಎಂಬ ಪಶ್ಚಾತ್ತಾಪವೂ ಇವನನ್ನು ತಪಿಸುವುದಿಲ್ಲ. ಯಾವನು ಹೀಗೆ ಅರಿತುಕೊಂಡಿರುವನೋ ಆವನು ಈ ಎರಡನ್ನೂ ಆತ್ಮನನ್ನಾಗಿ ಮಾಡಿಕೊಂಡಿರುತ್ತಾನೆ ಏಕೆಂದರೆ ಯಾವನು ಹೀಗೆ ತಿಳಿಯುವನೋ ಅವನು ಈ ಎರಡನ್ನೂ ಆತ್ಮನನ್ನಾಗಿ ಮಾಡಿಕೊಂಡಿರುತ್ತಾನೆ, ಹೀಗಿದೆ ಉಪನಿಷತ್ತು.

———

# ಭೃಗುವಲ್ಲಿ

## ಪ್ರಥಮಾನುವಾಕಃ

**ಭೃಗುರ್ವೈ ವಾರುಣಿಃ । ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಸ್ಮಾ ಏತತ್ ಪ್ರೋವಾಚ । ಅನ್ನಂ ಪ್ರಾಣಂ ಚಕ್ಷುಃ ಶ್ರೋತ್ರಂ ಮನೋ ವಾಚಮಿತಿ । ತಗ್ಂ ಹೋವಾಚ । ಯತೋ ವಾ ಇಮಾನಿ ಭೂತಾನಿ ಜಾಯಂತೇ । ಯೇನ ಜಾತಾನಿ ಜೀವಂತಿ । ಯತ್ ಪ್ರಯಂತ್ಯಭಿಸಂವಿಶಂತಿ । ತದ್ವಿಜಿಜ್ಞಾಸಸ್ವ । ತದ್ಬ್ರಹ್ಮೇತಿ । ಸ ತಪೋಽತಪ್ಯತ । ಸ ತಪಸ್ತಪ್ತ್ವಾ ॥೧॥**

ವರುಣನ ಮಗನಾದ ಭೃಗುವು ತನ್ನ ತಂದೆಯ ಬಳಿಗೆ ಬಂದು "ಭಗವನ್ ನನಗೆ ಬ್ರಹ್ಮನನ್ನು ಉಪದೇಶಿಸಿರಿ" ಎಂದು ಕೇಳಿದನು. ಆಗ ತಂದೆಯಾದ ವರುಣನು ಈ ರೀತಿ ತಿಳಿಸುತ್ತಾರೆ "ನೀನು ಮೊದಲ ಅನ್ನ, ಪ್ರಾಣ, ನೇತ್ರ ಕಿವಿ ಮತ್ತು ಮನಸನ್ನು ಇವುಗಳಲ್ಲಿ ಯಾವುದರಿಂದ ಜೀವಿಗಳು ಹುಟ್ಟುತ್ತವೆ. ಹುಟ್ಟಿದಮೇಲೆ ಯಾವುದರಿಂದ ಜೀವಿಸುತ್ತವೆ ಮತ್ತು ಎಲ್ಲಿಗೆ ತೆರಳಿ ಪುನರ್ಜನ್ಮವನ್ನು ಪಡೆಯುತ್ತವೆ ಎಂಬುದನ್ನು ಮೊದಲು ತಿಳಿದುಕೊಳ್ಳಬೇಕು. ಅದೇ ಬ್ರಹ್ಮ" ಎಂದು ಹೇಳಲು ಭೃಗುವು ತಪೋನಿರತನಾದನು ಹಾಗೆ ತಪಸ್ಸನ್ನು ಮಾಡಿ.

## ದ್ವಿತೀಯಾನುವಾಕಃ

**ಅನ್ನಂ ಬ್ರಹ್ಮೇತಿ ವ್ಯಜಾನಾತ್ । ಅನ್ನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಪ್ರಾಣೇನ ಜಾತಾನಿ ಜೀವಂತಿ । ಪ್ರಾಣಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ**

**ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋ ತಪ್ಯತ । ಸ ತಪಸ್ತಪ್ತ್ವಾ ॥೨॥**

ಆಹಾರವು ಬ್ರಹ್ಮವೆಂದು ಅವನು ತಿಳಿದನು. ಏಕೆಂದರೆ ಅನ್ನದಿಂದಲೇ ಎಲ್ಲಾ ಜೀವರಾಶಿಗಳು ಜನಿಸಿರುವುದೆಂದೂ, ಅವು ಅನ್ನದಿಂದಲೇ ಪ್ರಾಣ ಧಾರಣೆಮಾಡುತ್ತವೆಂದೂ, ಅವು ಅನ್ನಕ್ಕೇ ತೆರಳಿ ಪುನಃ ಅನ್ನದಿಂದಲೇ ಜನಿಸುವುವೆಂದು ತಿಳಿದನು. ತರುವಾಯ ಅವನ ತಂದೆಯಾದ ವರುಣನಬಳಿಗ ಬಂದು “ ಈಗ ಬ್ರಹ್ಮನ ವಿಚಾರವನ್ನು ತಿಳಿಸಿರಿ ” ಎಂದನು. ಆಗ ಅವನ ತಂದೆಯು ಹೇಳಿದನು “ ಬ್ರಹ್ಮನ ವಿಚಾರವನ್ನು ನೀನು ತಪಸ್ಸುಮಾಡಿ ಅರಿತುಕೊಳ್ಳಬೇಕು. ಮನಸ್ಥೈರ್ಯವನ್ನು ಹೊಂದಿ ಆಚರಿಸುವ ತಪಸ್ಸೇ ಬ್ರಹ್ಮ” ಹೀಗೆಂದಕೂಡಲೇ ಭೃಗುವು ತಪೋನಿರತನಾದನು, ಹಾಗೆ ತಪಸ್ಸನ್ನು ಮಾಡಿ—

## ತೃತೀಯಾನುವಾಕಃ

**ಪ್ರಾಣೋ ಬ್ರಹ್ಮೇತಿ ವ್ಯಜಾನಾತ್ । ಪ್ರಾಣಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಪ್ರಾಣೇನ ಜಾತಾನಿ ಜೀವಂತಿ । ಪ್ರಾಣಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ । ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋ ತಪ್ಯತ । ಸ ತಪಸ್ತಪ್ತ್ವಾ ॥೩॥**

ಅವನು ಪ್ರಾಣನು ಬ್ರಹ್ಮನೆಂದು ತಿಳಿದುಕೊಂಡನು. ಏಕೆಂದರೆ ಪ್ರಾಣದಿಂದಲೇ ಜೀವರಾಶಿಗಳು ಹುಟ್ಟುತ್ತವೆ ಹುಟ್ಟಿದವುಗಳು ಪ್ರಾಣದಿಂದಲೇ ಜೀವಿಸುತ್ತವೆ ಮತ್ತು ಪ್ರಾಣವನ್ನೇ ಕಡೆಗೆ ಹುಡುಗಿ ಪ್ರವೇಶಿಸುತ್ತವೆ. ಇದನ್ನು ಅರಿತುಕೊಂಡು ಭೃಗುವು ತನ್ನ ತಂದೆಯಾದ ವರುಣನ ಸಮೀಪಕ್ಕೆ ಹೋಗಿ “ ಭಗವನ್ ಬ್ರಹ್ಮವನ್ನು ಬೋಧಿಸಿರಿ ” ಎಂದನು. ಆಗ ವರುಣನು

ಅವನನ್ನು ಕುರಿತು ಹೇಳಿದನು "ತಪಸ್ಸಿನಿಂದ ಬ್ರಹ್ಮನನ್ನು ತಿಳಿದುಕೋ ತಪಸ್ಸು ಬ್ರಹ್ಮವು" ಎಂದು ಹೇಳಲು ಅವನು ಪುನಃ ತಪೋನಿರತನಾದನು. ಅವನು ತಪಸ್ಸನ್ನು ಮಾಡಿ —

ಚತುರ್ಥೋಽನುವಾಕಃ

**ಮನೋ ಬ್ರಹ್ಮೇತಿ ವ್ಯಜಾನಾತ್ । ಮನಸೋಽಹ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ಮನಸಾ ಜಾತಾನಿ ಜೀವಂತಿ । ಮನಃ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ ಭಗವೋ ಬ್ರಹ್ಮೇತಿ । ತಗ್ಂ ಹೋವಾಚ ! ತಪಸಾ ಬ್ರಹ್ಮ ವಿಜಿಜ್ಞಾಸಸ್ವ । ತಪೋ ಬ್ರಹ್ಮೇತಿ । ಸ ತಪೋ ಽತಪ್ಯತ । ಸ ತಪಸ್ತಪ್ತ್ವಾ ॥೪॥**

ಮನಸ್ಸೇ ಬ್ರಹ್ಮವೆಂದು ತಿಳಿದುಕೊಂಡನು. ಏಕೆಂದರೆ ಮನಸ್ಸಿನಿಂದಲೇ ಈ ಪ್ರಾಣಿಗಳು ಹುಟ್ಟುತ್ತವೆ, ಹುಟ್ಟಿದವುಗಳು ಮನಸ್ಸಿನಿಂದಲೇ ಜೀವಿಸುತ್ತವೆ ಮತ್ತು ಮನಸ್ಸನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಇದನ್ನು ಅರಿತುಕೊಂಡು ಭೃಗುವು ತನ್ನ ತಂದೆಯಬಳಿಗೆ ಬಂದು "ಭಗವನ್ ಬ್ರಹ್ಮವನ್ನು ಈಗ ಉಪದೇಶಿಸಿರಿ" ಎಂದು ಕೇಳಿದನು ಆಗ ವರುಣನು ಭೃಗುವನ್ನು ಕುರಿತು ಹೇಳಿದನು "ತಪಸ್ಸಿನಿಂದಲೇ ಬ್ರಹ್ಮನನ್ನು ತಿಳಿದುಕೋ. ತಪಸ್ಸೇ ಬ್ರಹ್ಮ" ಎಂದು ಹೇಳಲು ಭೃಗುವು ಪುನಃ ತಪೋ ನಿರತನಾದನು. ಅವನು ತಪಸ್ಸುಮಾಡಿ—

ಪಂಚಮೋಽನುವಾಕಃ

**ವಿಜ್ಞಾನಂ ಬ್ರಹ್ಮೇತಿ ವ್ಯಜಾನಾತ್ । ವಿಜ್ಞಾನಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ । ವಿಜ್ಞಾನೇನ ಜಾತಾನಿ ಜೀವಂತಿ । ವಿಜ್ಞಾನಂ ಪ್ರಯಂತ್ಯಭಿಸಂವಿಶಂತೀತಿ । ತದ್ವಿಜ್ಞಾಯ । ಪುನರೇವ ವರುಣಂ ಪಿತರಮುಪಸಸಾರ । ಅಧೀಹಿ**

**ಭಗವೋ ಬ್ರಹ್ಮೇತಿ। ತಗ್ಂ ಹೋವಾಚ। ತಪಸಾ ಬ್ರಹ್ಮ ವಿಜಿಜ್ಞಾಸಸ್ವ। ತಪೋ ಬ್ರಹ್ಮೇತಿ। ಸ ತಪೋ ತಪ್ಯತ। ಸ ತಪಸ್ತಪ್ತ್ವಾ ||೫||**

ವಿಜ್ಞಾನ ಬ್ರಹ್ಮ ಎಂದು ತಿಳಿದುಕೊಂಡನು. ಏಕೆಂದರೆ ಈ ಜೀವರಾಶಿಗಳು ವಿಜ್ಞಾನದಿಂದಲೇ ಹುಟ್ಟುತ್ತವೆ, ಹಾಗೆ ಹುಟ್ಟಿದವುಗಳು ವಿಜ್ಞಾನದಿಂದಲೇ ಜೀವಿಸುತ್ತವೆ ಮತ್ತು ವಿಜ್ಞಾನವನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಇದನ್ನು ಅರಿತುಕೊಂಡು ಭೃಗುವು ತನ್ನ ತಂದೆಯ ಬಳಿಗೆ ಬಂದು "ಹೇ ಭಗವನ್ ಈಗ ಬ್ರಹ್ಮವನ್ನು ಉಪದೇಶಿಸಿ" ಎಂದು ಕೇಳಿದನು. ಆಗ ವರುಣನು ಅವನನ್ನು ಕುರಿತು ಹೇಳಿದನು "ತಪಸ್ಸಿನಿಂದ ಬ್ರಹ್ಮವನ್ನು ತಿಳಿದುಕೋ, ತಪಸ್ಸೇ ಬ್ರಹ್ಮ" ಎಂದು ಹೇಳಲು ಭೃಗುವು ಪುನಃ ತಪೋನಿರತನಾದನು, ಅವನು ತಪಸ್ಸನ್ನು ಮಾಡಿ—

ಷಷ್ಠೋಽನುವಾಕಃ

**ಆನಂದೋ ಬ್ರಹ್ಮೇತಿ ವ್ಯಜಾನಾತ್। ಆನಂದಾದ್ಧ್ಯೇವ ಖಲ್ವಿಮಾನಿ ಭೂತಾನಿ ಜಾಯಂತೇ। ಆನಂದೇನ ಜಾತಾನಿ ಜೀವಂತಿ। ಆನಂದಂ ಪ್ರಯಂತ್ಯಭಿಸಂವಿಶಂತೀತಿ। ಸೈಷಾ ಭಾರ್ಗವೀ ವಾರುಣೀ ವಿದ್ಯಾ। ಪರಮೇ ವ್ಯೋಮನ್ ಪ್ರತಿಷ್ಠಿತಾ। ಸ ಯ ಏವಂ ವೇದ ಪ್ರತಿತಿಷ್ಠತಿ। ಅನ್ನವಾನನ್ನಾದೋ ಭವತಿ। ಮಹಾನ್ ಭವತಿ ಪ್ರಜಯಾ ಪಶುಭಿರ್ಬ್ರಹ್ಮವರ್ಚಸೇನ। ಮಹಾನ್ ಕೀರ್ತ್ಯಾ ||೬||**

ಆನಂದವು ಬ್ರಹ್ಮ ಎಂದು ತಿಳಿದುಕೊಂಡನು. ಏಕೆಂದರೆ ಆನಂದದಿಂದಲೇ ಈ ಲೋಕದ ಸಮಸ್ತ ಜೀವಗಳೂ ಹುಟ್ಟುತ್ತವೆ, ಹಾಗೆ ಹುಟ್ಟಿದವುಗಳು ಆನಂದದಿಂದ ಜೀವಿಸುತ್ತವೆ ಮತ್ತು ಆನಂದವನ್ನು ಕುರಿತು ಹೋಗಿ ಪ್ರವೇಶಿಸುತ್ತವೆ. ಆ ಭಾರ್ಗವೀ ವಾರುಣೀ ವಿದ್ಯೆಯು ಹೃದಯಾಕಾಶದ ಗುಹೆಯಲ್ಲಿ ಪ್ರತಿಷ್ಠಿತವಾಗಿರುವುದು, ಯಾವನು ಹೀಗೆ ತಿಳಿದುಕೊಳ್ಳುವನೋ

ಆವನ ಪ್ರತಿಷ್ಠಿತನಾಗುತ್ತಾನೆ. ಅನ್ನವಂತನೂ, ಅನ್ನಾದನೂ ಆಗುತ್ತಾನೆ, ಪುತ್ರರಿಂದಲೂ, ಪಶುಗಳಿಂದಲೂ. ಬ್ರಹ್ಮವರ್ಚಸ್ಸಿನಿಂದಲೂ ಅವನು ಮಹಾನ್ ಆಗುತ್ತಾನೆ. ಕೀರ್ತಿಯಿಂದಲೂ ಅವನು ಮಹಾನ್ ಆಗುತ್ತಾನೆ.

ಸಪ್ತಮೋಽನುವಾಕಃ

ಅನ್ನಂ ನ ನಿಂದ್ಯಾತ್ । ತದ್ ವ್ರತಂ । ಪ್ರಾಣೋ ವಾ ಅನ್ನಂ । ಶರೀರಮನ್ನಾದಂ । ಪ್ರಾಣೇ ಶರೀರಂ ಪ್ರತಿಷ್ಠಿತಂ । ಶರೀರೇ ಪ್ರಾಣಃ ಪ್ರತಿಷ್ಠಿತಃ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ । ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥೭॥

ಅನ್ನವನ್ನು ನಿಂದಿಸಕೂಡದು. ಅದು ವ್ರತ. ಪ್ರಾಣವೇ ಅನ್ನವು ಶರೀರವು ಅನ್ನಾದವು, ಪ್ರಾಣದಲ್ಲಿ ಶರೀರವು ಪ್ರತಿಷ್ಠಿತವಾಗಿರುತ್ತದೆ. ಹಾಗೆಯೇ ಶರೀರದಲ್ಲಿ ಪ್ರಾಣವು ಪ್ರತಿಷ್ಠಿತವಾಗಿರುತ್ತದೆ, ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಯಾರು ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದೆಂಬುದನ್ನು ತಿಳಿಯುತ್ತಾರೋ ಅವರೂ ಪ್ರತಿಷ್ಠಿತರಾಗುತ್ತಾರೆ. ಅನ್ನವಂತರೂ, ಅನ್ನಾದರೂ ಆಗುತ್ತಾರೆ. ಪುತ್ರರಿಂದಲೂ, ಪಶುಗಳಿಂದಲೂ ಬ್ರಹ್ಮವರ್ಚಸ್ಸಿನಿಂದಲೂ ಮಹಾನ್ ಆಗುತ್ತಾರೆ. ಕೀರ್ತಿಯಿಂದಲೂ ಮಹಾನ್ ಆಗುತ್ತಾರೆ.

ಅಷ್ಟಮೋಽನುವಾಕಃ

ಅನ್ನಂ ನ ಪರಿಚಕ್ಷೀತ । ತದ್ ವ್ರತಂ । ಆಪೋ ವಾ ಅನ್ನಂ । ಜ್ಯೋತಿರನ್ನಾದಂ । ಅಪ್ಸು ಜ್ಯೋತಿಃ ಪ್ರತಿಷ್ಠಿತಂ । ಜ್ಯೋತಿಷ್ಯಾಪಃ ಪ್ರತಿಷ್ಠಿತಾಃ । ತದೇತದನ್ನಮನ್ನೇ ಪ್ರತಿಷ್ಠಿತಂ ।

**ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ । ಮಹಾನ್ ಕೀರ್ತ್ಯಾ ॥೮॥**

ಅನ್ನವನ್ನು ನಿರಾಕರಿಸಕೂಡದು. ಅದು ವ್ರತ. ನೀರೇ ಅನ್ನವು, ಜ್ಯೋತಿಯು ಅನ್ನಾದವು. ನೀರಿನಲ್ಲಿ ಜ್ಯೋತಿಯು ಪ್ರತಿಷ್ಠಿತವಾಗಿರುವುದು ಹಾಗೆಯೇ ಜ್ಯೋತಿಯಲ್ಲಿ ನೀರೂ ಪ್ರತಿಷ್ಠಿತವಾಗಿರುತ್ತದೆ. ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿದೆ. ಯಾರು ಈ ರೀತಿ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದೆಂಬುದನ್ನು ತಿಳಿದುಕೊಳ್ಳುವರೋ ಅವರೂ ಪ್ರತಿಷ್ಠಿತರಾಗುತ್ತಾರೆ. ಅನ್ನವಂತರೂ, ಅನ್ನಾದರೂ ಆಗುತ್ತಾರೆ, ಪುತ್ರರಿಂದಲೂ, ಪಶುಗಳಿಂದಲೂ, ಬ್ರಹ್ಮವರ್ಚಸ್ಸಿನಿಂದಲೂ ಮಹಾನ್ ಆಗುತ್ತಾರೆ. ಕೀರ್ತಿಯಿಂದಲೂ ಮಹಾನ್ ಆಗುತ್ತಾರೆ.

ನವಮೋಽನುವಾಕಃ

**ಅನ್ನಂ ಬಹು ಕುರ್ವೀತ । ತದ್ ವ್ರತಂ । ಪೃಥಿವೀ ವಾ ಅನ್ನಂ । ಆಕಾಶೋಽನ್ನಾದಃ । ಪೃಥಿವ್ಯಾಮಾಕಾಶಃ ಪ್ರತಿಷ್ಠಿತಃ । ಆಕಾಶೇ ಪೃಥಿವೀ ಪ್ರತಿಷ್ಠಿತಾ । ತದೇತದನ್ನಮನ್ನೇ ಪ್ರತಿಷ್ಠಿತಂ । ಸ ಯ ಏತದನ್ನಮನ್ನೇ ಪ್ರತಿಷ್ಠಿತಂ ವೇದ ಪ್ರತಿತಿಷ್ಠತಿ । ಅನ್ನವಾನನ್ನಾದೋ ಭವತಿ । ಮಹಾನ್ ಭವತಿ । ಪ್ರಜಯಾ ಪಶುಭಿಃ ಬ್ರಹ್ಮವರ್ಚಸೇನ ಮಹಾನ್ ಕೀರ್ತ್ಯಾ ॥೯॥**

ಅನ್ನವನ್ನು ಹೆಚ್ಚಾಗಿ ಉತ್ಪಾದನೆಮಾಡಬೇಕು. ಅದು ವ್ರತ. ಪೃಥ್ವಿಯೇ ಅನ್ನವು, ಆಕಾಶವೇ ಅನ್ನಾದವು, ಪೃಥ್ವಿಯಲ್ಲಿ ಆಕಾಶವು ಪ್ರತಿಷ್ಠಿತವಾಗಿರುವುದು ಹಾಗೆಯೇ ಆಕಾಶದಲ್ಲಿ ಪೃಥ್ವಿಯು ಪ್ರತಿಷ್ಠಿತವಾಗಿರುವುದು. ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವುದು, ಯಾರು ಈ ಅನ್ನವು ಅನ್ನದಲ್ಲಿ ಪ್ರತಿಷ್ಠಿತವಾಗಿರುವದೆಂಬುದನ್ನು ತಿಳಿದುಕೊಳ್ಳುವರೋ ಅವರು ಪ್ರತಿಷ್ಠಿತರಾಗುತ್ತಾರೆ. ಅನ್ನವಂತರೂ, ಅನ್ನಾದರೂ ಆಗುತ್ತಾರೆ. ಪುತ್ರರಿಂದಲೂ,

ಪಶುಗಳಿಂದಲೂ, ಬ್ರಹ್ಮವರ್ಚಸ್ಸಿನಿಂದಲೂ ಪುಷ್ಟರಾಗುತ್ತಾರೆ ಕೀರ್ತಿಯಿಂದಲೂ ಪುಷ್ಟರಾಗುತ್ತಾರೆ.

ದಶಮೋಽನುವಾಕಃ

**ನ ಕಂಚನ ವಸತೌ ಪ್ರತ್ಯಾಚಕ್ಷೀತ । ತದ್ ವ್ರತಂ । ತಸ್ಮಾದ್ಯಯಾ ಕಯಾ ಚ ವಿಧಯಾ ಬಹ್ವನ್ನಂ ಪ್ರಾಪ್ನುಯಾತ್ । ಅರಾಧ್ಯಸ್ಮಾ ಅನ್ನಮಿತ್ಯಾಚಕ್ಷತೇ । ಏತದ್ವೈ ಮುಖತೋಽನ್ನಗ್‌ಂ ರಾದ್ಧಂ । ಮುಖತೋಽಸ್ಮಾ ಅನ್ನಗ್‌ಂ ರಾಧ್ಯತೇ । ಏತದ್ವೈ ಮಧ್ಯತೋಽನ್ನಗ್‌ಂ ರಾದ್ಧಂ । ಮಧ್ಯತೋಽಸ್ಮಾ ಅನ್ನಗ್‌ಂ ರಾಧ್ಯತೇ । ಏತದ್ವಾ ಅಂತತೋಽನ್ನಗ್‌ಂ ರಾದ್ಧಂ । ಅಂತತೋಽಸ್ಮಾ ಅನ್ನಗ್‌ಂ ರಾಧ್ಯತೇ । ಯ ಏವಂ ವೇದ ॥**

ವಸತಿಗಾಗಿ ಯಾರಾದರೂ ಬಂದರೆ ಅವರನ್ನು ನಿರಾಕರಿಸಕೂಡದು, ಅದು ವ್ರತ. ಆದುದರಿಂದ ಯಾವ ವಿಧದಿಂದಲಾದರೂ ಬಹಳ ಅನ್ನವನ್ನು ಸಂಗ್ರಹಿಸಿಕೊಳ್ಳಬೇಕು. "ಇವನಿಗೆ ಅನ್ನವು ಸಿದ್ಧವಾಗಿದೆ" ಎಂದು ವಿದ್ವಾಂಸರು ಹೇಳುತ್ತಾರೆ. ಈ ಅನ್ನವು ಮುಖ್ಯವಾಗಿ ಸಿದ್ಧವಾದರೆ ಇವನಿಗೆ ಅನ್ನವು ಮುಖ್ಯವಾಗಿ ಸಿದ್ಧವಾಗುತ್ತದೆ. ಇದೇ ಅನ್ನವು ಮಧ್ಯಮೋಪಚಾರದಿಂದ ಸಿದ್ಧವಾದರೆ ಇವನಿಗೆ ಅನ್ನವು ಮಧ್ಯಮೋಪಚಾರದಿಂದ ಸಿದ್ಧವಾದಂತಾಯಿತು. ಇದೇ ಅನ್ನವು ಅಧಮೋಪಚಾರದಿಂದ ಸಿದ್ಧವಾದರೆ ಇವನಿಗೂ ಅನ್ನವು ಅಧಮೋಪಚಾರದಿಂದ ಸಿದ್ಧವಾದಂತಾಯಿತು. ಯಾರು ಇದನ್ನು ಹೀಗೆ ಅರಿಯುತ್ತಾರೋ ಅವರು ಅಂತಹ ಫಲವನ್ನೇ ಹೊಂದುತ್ತಾರೆ.

**ಕ್ಷೇಮ ಇತಿ ವಾಚಿ । ಯೋಗಕ್ಷೇಮ ಇತಿ ಪ್ರಾಣಾಪಾನಯೋಃ । ಕರ್ಮೇತಿ ಹಸ್ತಯೋಃ । ಗತಿರಿತಿ ಪಾದಯೋಃ । ವಿಮುಕ್ತಿರಿತಿ ಪಾಯೌ । ಇತಿ ಮಾನುಷೀಃ ಸಮಾಜ್ಞಾಃ । ಅಥ ದೈವೀಃ । ತೃಪ್ತಿರಿತಿ ವೃಷ್ಟೌ । ಬಲಮಿತಿ ವಿದ್ಯುತಿ । ಯಶ ಇತಿ**

**ಪಶುಷು । ಜ್ಯೋತಿರಿತಿ ನಕ್ಷತ್ರೇಷು । ಪ್ರಜಾತಿರಮೃತಮಾನಂದ ಇತ್ಯುಪಸ್ಥೇ । ಸರ್ವಮಿತ್ಯಾಕಾಶೇ । ತತ್ ಪ್ರತಿಷ್ಠೇತ್ಯುಪಾ-ಸೀತ । ಪ್ರತಿಷ್ಠಾವಾನ್ ಭವತಿ । ತನ್ಮಹ ಇತ್ಯುಪಾಸೀತ । ಮಹಾನ್ಭವತಿ । ತನ್ಮನ ಇತ್ಯುಪಾಸೀತ । ಮಾನವಾನ್ ಭವತಿ । ತನ್ನಮ ಇತ್ಯುಪಾಸೀತ । ನಮ್ಯಂತೇಽಸ್ಮೈ ಕಾಮಾಃ । ತದ್ ಬ್ರಹ್ಮೇತ್ಯುಪಾಸೀತ । ಬ್ರಹ್ಮವಾನ್ ಭವತಿ । ತತ್ ಬ್ರಹ್ಮಣ ಪರಿಮರ ಇತ್ಯುಪಾಸೀತ । ಪರ್ಯೇಣಂ ಮ್ರಿಯಂತೇ ದ್ವಿಷಂತಃ ಸಪತ್ನಾಃ । ಪರಿಯೇಽಪ್ರಿಯಾ ಭ್ರಾತೃವ್ಯಾಃ । ಸ ಯಶ್ಚಾಯಂ ಪುರುಷೇ । ಯಶ್ಚಾಸಾವಾದಿತ್ಯೇ । ಸ ಏಕಃ । ಸಯ ಏವಂ ವಿತ್ । ಅಸ್ಮಾಲ್ಲೋಕಾತ್ ಪ್ರೇತ್ಯ । ಏತಮನ್ನಮಯಮಾತ್ಮಾನಮುಪ-ಸಂಕ್ರಮ್ಯ । ಏತಂ ಪ್ರಾಣಮಯ ಮಾತ್ಮಾನಮುಪಸಂಕ್ರಮ್ಯ । ಏತಂ ಮನೋಮಯಮಾತ್ಮಾನ ಮುಪಸಂಕ್ರಮ್ಯ । ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಮ್ಯ । ಏತಮಾನಂದಮಯ-ಮಾತ್ಮಾನಮುಪಸಂಕ್ರಮ್ಯ । ಇಮಾನ್ ಲೋಕಾನ್ ಕಾಮಾನ್ನೀ ಕಾಮರೂಪ್ಯನುಸಂಚರನ್ । ಏತಥ್ಸಾಮಗಾಯನ್ನಾಸ್ತೇ ॥**

ವಾಕ್ಕಿನಲ್ಲಿ ಕ್ಷೇಮವೆಂದೂ, ಪ್ರಾಣಾಪಾನಗಳಲ್ಲಿ ಯೋಗಕ್ಷೇಮವೆಂದೂ ಕೈಗಳಲ್ಲಿ ಕರ್ಮವೆಂದೂ, ಕಾಲುಗಳಲ್ಲಿ ಗತಿಯೆಂದೂ, ವಾಯುವಿನಲ್ಲಿ ಬಿಡು ವಿಕೆಯೆಂದೂ, ಬ್ರಹ್ಮನನ್ನು ಉಪಾಸಿಸಬೇಕು. ಹೀಗಿವೆ ಮನುಷ್ಯ ಸಂಬಂಧ ವಾದ ಉಪಾಸನೆಗಳು. ಇನ್ನು ದೇವತಾಸಂಬಂಧವಾದ ಉಪಾಸನೆಗಳು ಮಳೆ ಬೀಳುವುದರಿಂದ ತೃಪ್ತಿ ಎಂದೂ. ಮಿಂಚಿನಲ್ಲಿ ಬಲವಿರುವುದೆಂದೂ, ಪಶುಗಳಲ್ಲಿ ಯಶಸ್ಸೆಂದೂ, ನಕ್ಷತ್ರಗಳಲ್ಲಿ ಜ್ಯೋತಿ ಎಂದೂ, ಉಪಸ್ಥಾಪ ದಲ್ಲಿ ಸಂತಾನ. ಅಮೃತತ್ವಪ್ರಾಪ್ತಿ ಆನಂದ ಇವುಗಳೆಂದೂ, ಆಕಾಶದಲ್ಲಿ ಎಲ್ಲವೂ ಇರುವುದೆಂದೂ ಬ್ರಹ್ಮವನ್ನು ಉಪಾಸಿಸಬೇಕು. ಆಕಾಶರೂಪನಾದ ಬ್ರಹ್ಮನನ್ನು ಪ್ರತಿಷ್ಠೆ ಎಂದು ಉಪಾಸಿಸಬೇಕು. ಆಗ ಅವರೂ ಪ್ರತಿಷ್ಠಾ ವಂತರಾಗುತ್ತಾರೆ. ಬ್ರಹ್ಮನನ್ನು ಮಹತ್ ಎಂದು ಉಪಾಸಿಸಬೇಕು. ಅವರೂ ಮಹಾನ್ ಆಗುತ್ತಾರೆ. ಆವನನ್ನು ಮಾನಸ್ಸೆಂದು ಉಪಾಸಿಸಬೇಕು

ಆಗ ಘನನಮಾಡಲು ಸಮರ್ಥರಾಗುತ್ತಾರೆ. ಅದನ್ನು ನಮಸ್ಕಾರವೆಂದು ಉಪಾಸಿಸಬೇಕು. ಆಗ ಇವರಿಗೆ ಭೋಗ್ಯ ವಸ್ತುಗಳು ನಮಿಸುವುವು. ಅದನ್ನು ಬ್ರಹ್ಮನೆಂದು ಉಪಾಸಿಸಬೇಕು ಆಗ ಬ್ರಹ್ಮವಂತರಾಗುತ್ತಾರೆ. ಅದು ಬ್ರಹ್ಮಕ್ಕೆ ಸಂಹಾರಸಾಧನ ಎಂದು ಉಪಾಸಿಸಬೇಕು. ಆಗ ಇವರನ್ನು ದ್ವೇಷಿಸುವ ಶತೃಗಳು ನಾಶವಾಗುತ್ತಾರೆ, ಆವರ ಅಪ್ರಿಯರಾದ ಶತೃಗಳೂ ನಾಶವಾಗುತ್ತಾರೆ. ಯಾವ ಆ ಇವನು ಪುರುಷನಲ್ಲಿರುವನೋ ಯಾವ ಅವನು ಆದಿತ್ಯನಲ್ಲಿರುವನೋ ಅವನು ಒಬ್ಬನೇ, ಯಾರು ಹೀಗೆ ತಿಳಿದುಕೊಳ್ಳುವನೋ ಅವರು ಈ ಲೋಕದಿಂದ ಹೊರಟುಹೋಗಿ ಈ ಅನ್ನಮಯವೆಂಬ ಆತ್ಮನನ್ನು ಹೊಂದಿ, ಈ ಪ್ರಾಣಮಯನೆಂಬ ಆತ್ಮನನ್ನು ಹೊಂದಿ, ಈ ಮನೋಮಯನೆಂಬ ಆತ್ಮನನ್ನು ಹೊಂದಿ, ಈ ವಿಜ್ಞಾನಮಯನೆಂಬ ಆತ್ಮನನ್ನು ಹೊಂದಿ, ಈ ಆನಂದಮಯನೆಂಬ ಆತ್ಮನನ್ನು ಹೊಂದಿ, ಯಥೇಚ್ಛ ಅನ್ನಶಾಲಿಗಳಾಗಿ, ಯಥೇಚ್ಛ ರೂಪಶಾಲಿಗಳಾಗಿ, ಈ ಲೋಕಗಳಲ್ಲಿ ಸಂಚರಿಸುತ್ತ ಈ ಸಾಮವನ್ನು ಹಾಡುತ್ತ ಇರುವರು.

**ಹಾ೩ ವುಹಾ೩ ವುಹಾ೩ ವು । ಅಹಮನ್ನ-ಮಹಮನ್ನ-ಮಹಮನ್ನಂ । ಅಹಮನ್ನಾದೋ೨ ಽಹಮನ್ನಾದೋ೨ ಽಹಮನ್ನಾದಃ । ಅಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃದಹಗ್ಂ ಶ್ಲೋಕಕೃತ್ । ಅಹಮಸ್ಮಿ ಪ್ರಥಮಜಾ ಋತಾ೩ ಸ್ಯ ॥**

**ಪೂರ್ವಂ ದೇವೇಭ್ಯೋ ಅಮೃತಸ್ಯ ನಾ೩ ಭಾಯಿ । ಯೋ ಮಾದದಾತಿ ಸ ಇದೇವ ಮಾ೩ ವಾಃ । ಅಹಮನ್ನಮನ್ನಮದಂತಮಾ೩ ದ್ಮಿ । ಅಹಂ ವಿಶ್ವಂ ಭುವನಮಭ್ಯಭವಾಂ । ಸುವರ್ನ ಜ್ಯೋತೀಃ । ಯ ಏವಂ ವೇದ । ಇತ್ಯುಪನಿಷತ್ ॥೧೦॥**

ಅಹೋ, ಅಹೋ, ಅಹೋ, ನಾನು ಅನ್ನ, ನಾನು ಅನ್ನ, ನಾನು ಅನ್ನ. ನಾನು ಅನ್ನಾದ, ನಾನು ಅನ್ನಾದ, ನಾನು ಅನ್ನಾದ ; ನಾನು ಶ್ಲೋಕಕರ್ತೃ. ನಾನು ಶ್ಲೋಕಕರ್ತೃ. ನಾನು ಶ್ಲೋಕಕರ್ತೃ. ನಾನು ಋತಕ್ಕೆ ಮೊದಲು ಹುಟ್ಟಿರುತ್ತೇನೆ ಮತ್ತು ದೇವತೆಗಳಿಗೆ ಮೊದಲು

ಇರುತ್ತೇನೆ. ನಾನು ಅಮೃತದ ಮಧ್ಯವು. ಯಾವನು ನನ್ನನ್ನು ಅನ್ನಾರ್ಥಿಗಳಿಗೆ ಕೊಡುತ್ತಾರೆಯೋ ಅವರು ಹೀಗೆ ನನ್ನನ್ನು ಕಾಪಾಡು ತ್ತಾರೆ. ಅನ್ನರೂಪಿಯಾದ ನಾನು ಇತರರಿಗೆ ಅನ್ನವನ್ನು ಕೊಡದೆ ಇರುವವರನ್ನು ತಿನ್ನುತ್ತೇನೆ. ನಾನು ಸಮಸ್ತ ಭುವನವನ್ನು ಈಶ್ವರರೂಪಿ ನಿಂದ ಉಪಸಂಹರಿಸುತ್ತೇನೆ. ಸೂರ್ಯನಂತಿರುವ ಜ್ಯೋತಿಯು ನಾನು ಯಾರು ಹೀಗೆ ಅರಿಯುತ್ತಾರೋ ಅವರು ಪೂರ್ವೋಕ್ತವಾದ ಫಲವನ್ನು ಹೊಂದುತ್ತಾರೆ. ಹೀಗೆ ಹೇಳುತ್ತದೆ ಉಪನಿಷತ್ತು.

**ಹರಿಃ ಓಂ । ಸಹ ನಾವವತು । ಸಹನೌ ಭುನಕ್ತು । ಸಹ ವೀರ್ಯಂ ಕರವಾವಹೈ । ತೇಜಸ್ವಿ ನಾವಧೀತಮಸ್ತು । ಮಾ ವಿದ್ವಿಷಾವಹೈ ॥ ಓಂ ಶಾಂತಿಃ ಶಾಂತಿಃ ಶಾಂತಿಃ ॥**

ಹರಿಃ ಓಂ ನಾವೆಲ್ಲರೂ ಕಾಪಾಡಲ್ಪಡಲಿ, ನಮ್ಮೆಲ್ಲರನ್ನು ಪಡೆದು ಕೊಳ್ಳಲಿ, ನಾವು ಜೊತೆಯಲ್ಲಿ ಸಾಮರ್ಥ್ಯವನ್ನುಂಟುಮಾಡುವಂತಾಗಲಿ, ನಮ್ಮಿಬ್ಬರ ಅಧ್ಯಯನವು ತೇಜಸ್ವಿಯಾಗಲಿ. ನಾವು ಪರಸ್ಪರ ದ್ವೇಷಮಾಡದೆ ಇರುವಂತಾಗಲಿ. ಓಂ ಶಾಂತಿಃ ಶಾಂತಿಃ ಶಾಂತಿಃ.

ತೈತ್ತರೀಯೋಪನಿಷತ್ ಸಮಾಪ್ತಃ

———

# ಸಂಪೂರ್ಣ ಆಚಾರ್ಯವಂಶ ಪರಂಪರೆ

## ಸ್ತ್ರೀಪ್ರಧಾನವಾದದ್ದು—ಅರ್ಥಕ್ರಮದ ವಂಶ

ಅಥರ್ವಂಶ : ಪೌತಿಮಾಷೀ ಪುತ್ರಃ ಕಾತ್ಯಾಯಿನೀ ಪುತ್ರಾತ್ ಕಾತ್ಯಾಯಿನೀ ಪುತ್ರೋ ಗೌತಮೀ ಪುತ್ರಾದ್ಗೌತಮೀ ಪುತ್ರೋ ಭಾರಧ್ವಾಜೀ ಪುತ್ರಾತ್ ಭಾರದ್ವಾಜೀ ಪುತ್ರಃ ಪಾರಾಶರೀ ಪುತ್ರಾತ್ ಪರಾಶರೀಪುತ್ರ ಔಪಸ್ವಸ್ತೀಪುತ್ರಾದೌಪಸ್ವಸ್ತೀಪುತ್ರಃ ಪಾರಾಶರೀಪುತ್ರಾತ್ ಪಾರಾಶರೀ ಪುತ್ರಃ ಕಾತ್ಯಾಯನೀ ಪುತ್ರಾತ್ ಕಾತ್ಯಾಯನೀ ಪುತ್ರಃ ಕೌಶಿಕೀ ಪುತ್ರಾತ್ ಕೌಶಿಕೀ ಪುತ್ರ ಆಲಂಬೀ ಪುತ್ರಾಚ್ಚ ವೈಯಾಘ್ರಪದೀ ಪುತ್ರಾಚ್ಚ ವೈಯಾಘ್ರಪದೀ ಪುತ್ರಃ ಕಾಣ್ವೀ ಪುತ್ರಾಚ್ಚ ಕಾಪೀ ಪುತ್ರಾಚ್ಚ ಕಾಪೀಪುತ್ರಃ ॥೧॥

ಆತ್ರೇಯೀ ಪುತ್ರಾದಾತ್ರೇಯೀ ಪುತ್ರೋ ಗೌತಮೀ ಪುತ್ರಾದ್ಗೌತಮೀ ಪುತ್ರೋ ಭಾರದ್ವಾಜೀ ಪುತ್ರಾದ್ ಭಾರದ್ವಾಜೀ ಪುತ್ರಃ ಪಾರಾಶರೀ ಪುತ್ರಾತ್ ಪಾರಾಶರೀ ಪುತ್ರೋವಾತ್ಸೀ ಪುತ್ರಾತ್ ವಾತ್ಸೀ ಪುತ್ರಃ ಪಾರಾಶರೀಪುತ್ರಾತ್ ಪಾರಾಶರೀಪುತ್ರೋ ವಾರ್ಕಾರುಣೀಪುತ್ರಾದ್ ವಾರ್ಕಾರುಣೀ ಪುತ್ರೋ ವಾರ್ಕಾರುಣೀ ಪುತ್ರಾದ್ ವಾರ್ಕಾರುಣೀಪುತ್ರ ಆರ್ತಭಾಗೀ ಪುತ್ರಾದಾರ್ತಭಾಗೀ ಪುತ್ರಃ ಶೌಂಗೀಪುತ್ರಾಽಶ್ಶೌಂಗೀಪುತ್ರಃ ಸಾಂಕೃತೀ ಪುತ್ರಾತ್ಸಾಂಕೃತೀ ಪುತ್ರ ಆಲಂಬಾಯನೀ ಪುತ್ರಾತ್ ಆಲಂಬಾಯನೀ ಪುತ್ರ ಆಲಂಬೀ ಪುತ್ರಾಽದಾಲಂಬೀಪುತ್ರೋ ಜಾಯನ್ತೀ ಪುತ್ರಾಽಜ್ಜಾಯನ್ತೀ ಪುತ್ರೋ ಮಾಂಡೂಕಾಯನೀ ಪುತ್ರಾಽನ್ಮಾಂಡೂಕಾಯನೀ ಪುತ್ರೋ ಮಾಂಡೂಕೀ ಪುತ್ರಾತ್ ಮಾಂಡೂಕೀ ಪುತ್ರಃ ಶಾಂಡಿಲೀ ಪುತ್ರಾಽಚ್ಛಾಂಡಿಲೀ ಪುತ್ರೋ ರಾಥೀಕರೀ ಪುತ್ರಾಽದ್ರಾಥಿಕರೀ ಪುತ್ರೋ ಭಾಲುಕೀ ಪುತ್ರಾದ್ ಭಾಲುಕೀ ಪುತ್ರಃ ಕ್ರೌಚಿಂಕೀ ಪುತ್ರಾಭ್ಯಾಂ ಕ್ರೌಂಚಿಕೀ ಪುತ್ರೌ ವೈದಭೃತೀ ಪುತ್ರಾದ್ ವೈದಭೃತೀ ಪುತ್ರಃ ಕಾರ್ಶಕೇಯಿ ಪುತ್ರಾತ್ ಕಾರ್ಶಕೇಯೀ ಪುತ್ರಃ ಪ್ರಾಚೀನಯೋಗೀಪುತ್ರಾತ್ ಪ್ರಾಚೀನಯೋಗೀ ಪುತ್ರಃ ಸಾಂಜೀವೀ ಪುತ್ರಾತ್ ಸಾಂಜೀವೀ ಪುತ್ರಃ ಪ್ರಾಶ್ನೀ ಪುತ್ರಾದಾಸುರಿವಾಸಿನಃ ಪ್ರಾಶ್ನೀ ಪುತ್ರ ಆಸುರಾಯಣಾಽದಾಸುರಾಯಣ ಆಸುರೇರಾಸುರಿಃ ॥೨॥

ಈಗ ವಂಶವು. ಪೌತಿಮಾಷೀಮಗನು ಕಾತ್ಯಾಯನೀಮಗನಿಂದ, ಕಾತ್ಯಾಯನೀಮಗನು ಗೌತಮೀಮಗನಿಂದ, ಗೌತಮೀಮಗನು ಭಾರ ದ್ವಾಜೀ ಮಗನೀದ, ಭಾರದ್ವಾಜೀಮಗನು ಪಾರಾಶಾರೀಮಗನಿಂದ, ಪಾರಾಶಾರೀಮಗನು ಔಪಸ್ವಸ್ತೀಮಗನಿಂದ, ಔಪಸ್ವಸ್ತೀಮಗನು ಪಾರಾಶರೀಮಗನಿಂದ, ಪಾರಾಶರೀಮಗನು ಕಾತ್ಯಾಯಿನೀಮಗನಿಂದ, ಕಾತ್ಯಾಯನೀಮಗನು ಕೌಶಿಕೀಮಗನಿಂದ. ಕೌಶಿಕೀಮಗನು ಆಲಂಬೀಮಗ ನಿಂದ ಮತ್ತು ವೈಯಾಘ್ರಪದೀಮಗನಿಂದ, ವೈಯಾಘ್ರಪದೀಮಗನು ಕಾಣ್ವೀಮಗನಿಂದಲೂ. ಕಾಪೀಮಗನಿಂದಲೂ, ಕಾಪೀಮಗನು ಆತ್ರೇಯೀ ಮಗನಿಂದ, ಆತ್ರೇಯಿಮಗನು ಗೌತಮೀಮಗನಿಂದ, ಕೌತಮೀಮಗನು ಭಾರದ್ವಾಜೀಮಗನಿಂದ, ಭಾರದ್ವಾಜೀಮಗನು ಪಾರಾಶರೀಪುತ್ರನಿಂದ, ಪಾರಾಶರೀಮಗನು ವಾತ್ಸೀಮಗನಿಂದ, ವಾತ್ಸಿಮಗನು ಪಾರಾಶರೀಮಗ ನಿಂದ, ಪಾರಾಶರೀಮಗನು ವಾರ್ಕಾರುಣೀಮಗನಿಂದ, ವಾರ್ಕಾರುಣೀ ಮಗನು ವಾರ್ಕಾರುಣೀಮಗನಿಂದ, ವಾರ್ಕಾರುಣೀಮಗನು ಆರ್ತಭಾಗೀ ಮಗನಿಂದ, ಆರ್ತಭಾಗೀಮಗನು ಶೌಂಗೀಮಗನಿಂದ, ಶೌಂಗೀಮಗನು ಸಾಂಕೃತೀಮಗನಿಂದ, ಸಾಂಕೃತೀಮಗನು ಆಲಂಬಾಯನೀಮಗನಿಂದ. ಆಲಂ ಬಾಯನೀಮಗನು ಜಾಯಂತಿಮಗನಿಂದ, ಜಾಯಂತೀಮಗನು ಮಾಂಡೂ ಕಾಯನೀ ಮಗನಿಂದ, ಮಾಂಡೂಕಾಯನೀಮಗನು ಮಾಂಡೂಕೀಮಗನಿಂದ, ಮಾಂಡೂಕೀಮಗನು ಶೌಂಡಿಲೀಮಗನಿಂದ, ಶೌಂಡಿಲೀಮಗನು ರಾಥೀತರೀ ಮಗನಿಂದ, ರಾಥೀತರೀಮಗನು ಭಾಲುಕೀಮಗನಿಂದ, ಭಾಲುಕೀಮಗನು ಕ್ರೌಂಚಿಕೀಮಗರಿಬ್ಬರಿಂದ, ಕ್ರೌಂಚಿಕೀಮಗನು ವೈದಭೃತೀಮಗನಿಂದ, ವೈದ ಭೃತೀಮಗನು ಕಾರ್ಶಕೇಯೀಮಗನಿಂದ, ಕಾರ್ಶಕೇಯಿಮಗನು ಪ್ರಾಚೀನ ಯೋಗಿಮಗನಿಂದ, ಪ್ರಾಚೀನಯೋಗೀಮಗನು ಸಾಂಜೀವೀಮಗನಿಂದ, ಸಾಂಜೀವೀಮಗನು ಆಸುರೀವಾಸಿಯಾದ ಪ್ರಾಶ್ನೀಮಗನಿಂದ, ಪ್ರಾಶ್ನೀ ಮಗನು ಆಸುರಾಯಣನಿಂದ, ಆಸುರಾಯಣನು ಆಸುರಿಯಿಂದ, ಆಸುರಿಯು.

ಯಾಜ್ಞವಲ್ಕ್ಯಾದ್ ಯಾಜ್ಞವಲ್ಕ್ಯ ಉದ್ದಾಲಕಾದುದ್ದಾಲಕೋಽರು ಣಾದರುಣಾ ಉಪವೇಶೇರುಪವೇಶಿಃ ಕುಶ್ರೇಃ ಕುಶ್ರಿರ್ವಾಜಶ್ರವಸೋ ವಾಜ

ಶ್ರವಾ ಜಿಹ್ವಾವತೋ ಭಾದ್ಯೋಗಾತ್ ಜ್ಜಿಹ್ವಾವಾನ್ ಭಾದ್ಯೋಗೋಽಸಿತಾದ್ವಾರ್ಷಗಣಾದಸಿತೋ ವಾರ್ಷಗಣೋ ಹರಿತಾತ್ ಕಶ್ಯಪಾದ್ಧರಿತಃ ಕಶ್ಯಪಃ ಶಿಲ್ಪಾದ್ ಕಶ್ಯಪಾಚ್ಛಿಲ್ಪಃ ಕಶ್ಯಪಃ ಕಶ್ಯಪೋನೈಧ್ರುವೇ, ಕಶ್ಯಪೋ ನೈಧ್ರುವಿರ್ವಾಚೋ ವಾಗಂಭಿಣ್ಯಾ ಅಂಭಿಣ್ಯಾದಿತ್ಯಾದಾದಿತ್ಯಾನೀಮಾನಿ ಶುಕ್ಲಾನಿ ಯಜೂಂಷಿ ವಾಜಸನೇ ಯೇನ ಯಾಜ್ಞವಲ್ಕ್ಯೇನಾಖ್ಯಾಯನ್ತೇ ॥೩॥

ಆಸುರಿಯು ಯಾಜ್ಞವಲ್ಕ್ಯನಿಂದ. ಯಾಜ್ಞವಲ್ಕ್ಯನು ಉದ್ದಾಲಕನಿಂದ, ಉದ್ದಾಲಕನು ಆರುಣನಿಂದ, ಆರುಣನು ಉಪವೇಶಿಯಿಂದ, ಉಪವೇಶಿಯು ಕುಶ್ರಿಯಿಂದ. ಕುಶ್ರಿಯು ವಾಜಶ್ರವಸನಿಂದ, ವಾಜಶ್ರವಸನು ಜಿಹ್ವಾವಂತಭಾದ್ಯೋಗನಿಂದ, ಜಿಹ್ವಾವಂತಭಾದ್ಯೋಗನು ಅಸಿತವಾರ್ಷಗಣನಿಂದ, ಅಸಿತವಾರ್ಷಗಣನು ಅಸಿತವಾರ್ಷಗಣನಿಂದ, ಅಸಿತವಾರ್ಷಗಣನು ಹರಿತಕಶ್ಯಪನಿಂದ, ಹರಿತಕಶ್ಯಪನು ಸಿಲ್ಪ ಕಶ್ಯಪನಿಂದ, ಶಿಲ್ಪಕಶ್ಯಪನು ಕಶ್ಯಪನೈಧ್ರುವಿಯಿಂದ ಕಶ್ಯಪನೈಧ್ರುವಿಯು ವಾಕ್ಕಿನಿಂದ, ವಾಕ್ಕು ಅಂಭಿಣಿಯಿಂದ, ಅಂಭಿಣಿಯು ಆದಿತ್ಯನಿಂದ, ಆದಿತ್ಯಸಂಬಂಧವಾದ ಈ ಶುಕ್ಲಯಜುಸ್ಸುಗಳು ವಾಜಸನೇಯ ಯಾಜ್ಞವಲ್ಕ್ಯನಿಂದ ಹೇಳಲ್ಪಟ್ಟಿವೆ.

ಸಮಾನಮಾ ಸಾಂಜೀವೀಪುತ್ರಾತ್ ಸಾಂಜೀವೀ ಪುತ್ರೋ ಮಾಣ್ಡೂಕಾಯನೇರ್ಮಾಂಡೂಕಾಯನಿರ್ಮಾಂಡವ್ಯಾನ್ಮಾಂಡವ್ಯ ಕೌತ್ಸಾತ್ ಕೌತ್ಸೋ ಮಾಹಿತ್ಥೇರ್ಮಾಹಿತ್ಥಿರ್ವಾಮಕಕ್ಷಾಯಣಾದ್ ವಾಮಕಕ್ಷಾಯಣಃ ಶಾಂಡಿಲ್ಯಾಚ್ಛಾಂಡಿಲ್ಯೋವಾತ್ಸ್ಯಾದ್ ವಾತ್ಸ್ಯಃ ಕುಶ್ರೇಃ ಕುಶ್ರಿರ್ಯಜ್ಞವಾಚಸೋ ರಾಜಸ್ತಂಬಾಯನಾದ್ ಯಜ್ಞವಾಚಾ ರಾಜಸ್ತಂಬಾಯನಸ್ತುರಾತ್ ಕಾವಷೇಯಾತ್ ತುರಃ ಕಾವಷೇಯಃ ಪ್ರಜಾಪತೇಃ ಪ್ರಜಾಪತಿರ್ಬ್ರಹ್ಮಣೋ ಬ್ರಹ್ಮಸ್ವಯಂಭು ; ಬ್ರಹ್ಮಣೇನಮಃ ॥೪॥

ಸಾಂಜೀವೀಮಗನವರೆಗೆ ಸಮಾನವು. ಸಾಂಜೀವೀಮಗನು ಮಾಂಡುಕಾಯಿನಿಯಿಂದ, ಮಾಂಡುಕಾಯನಿಯು ಮಾಂಡವ್ಯನಿಂದ, ಮಾಂಡವ್ಯನು ಕೌತ್ಸನಿಂದ, ಕೌತ್ಸನು ಮಾಹಿತ್ಥಿಯಿಂದ, ಮಾಹಿತ್ಥಿಯು ವಾಮಕಕ್ಷಾಯಣ

ನಿಂದ, ವಾಮಕಕ್ಷಾಯಣನು ಶಾಂಡಿಲ್ಯನಿಂದ, ಶಾಂಡಿಲ್ಯನು ವಾತ್ಸ್ಯನಿಂದ, ವಾತ್ಸ್ಯನು ಕುಶ್ರಿಯಿಂದ, ಕುಶ್ರಿಯು ಯಜ್ಞವಚಸ್ಸು ರಾಜಸ್ತಂಬಾಯನ ನಿಂದ, ಯಜ್ಞವಚಸ್ಸು ರಾಜಸ್ತಂಬಾಯನನು ತುರುಕಾವಷೇಯನಿಂದ, ತುರ ಕಾವಷೇಯನು ಪ್ರಜಾಪತಿಯಿಂದ, ಪ್ರಜಾಪತಿಯು ಬ್ರಹ್ಮದಿಂದ, ಬ್ರಹ್ಮವು ಸ್ವಯಂಭು. ಬ್ರಹ್ಮಕ್ಕೆ ನಮಸ್ಕಾರ.

## ಪುರುಷಪ್ರದಾನವಾದದ್ದು—ಪಾಠಕ್ರಮವಾದ ವಂಶ

ಅಥವಗ್‌ಂಶಃ : ಪೌತಿಮಾಷ್ಯೋ ಗೌಪವನಾದ್ಗೌಪವನಃ ಪೌತಿಮಾ ಷ್ಯಾತ್ ಪೌತಿಮಾಷ್ಯೋ ಗೌಪವನಾದ್ಗೌಪವನಃ ಕೌಶಿಕಾತ್ ಕೌಶಿಕಃ ಕೌಂಡಿ ನ್ಯಾತ್ ಕೌಂಡಿನ್ಯಃ ಶಾಂಡಿಲ್ಯಾಚ್ಛಾಂಡಿಲ್ಯಃ ಕೌಶಿಕಾಚ್ಚ ಗೌತಮಾಚ್ಚ ಗೌತಮಃ ಆಗ್ನಿವೇಶ್ಯಾದಾಗ್ನಿವೇಶ್ಯಃ ಶಾಂಡಿಲ್ಯಾಚ್ಚಾನಭಿಮಾತಾಚ್ಚಾನಭಿ ಮ್ಲಾತ ಆನಭಿಮ್ಲಾತಾದಾನಭಿಮ್ಲಾತ ಆನಭಿಮ್ಲಾತಾದಾನಭಿಮ್ಲಾತೋ ಗೌತಮಾದ್ಗೌತಮಃ ಸೈತವ ಪ್ರಾಚೀನ ಯೋಗ್ಯಾಭ್ಯಾಗ್‌ಂ ಸೈತವಪ್ರಾಚೀನ ಯೋಗ್ಯೌ ಪಾರಾಶರ್ಯಾತ್ ಪಾರಾಶರ್ಯೋ ಭಾರದ್ವಾಜಾದ್ಭಾರದ್ವಾಜೋ ಭಾರದ್ವಾರಾಚ್ಚ ಗೌತಮಾಚ್ಚ ಗೌತಮೋ ಭಾರದ್ವಾಜಾದ್ಭಾರದ್ವಾಜಃ ಪಾರಾ ಶರ್ಯಾತ್ ಪಾರಾಶರ್ಯೋ ಬೈಜವಾಪಾಯನಾದ್ವೈಜವಾಪಾಯನಃ ಕೌಶಿ ಕಾಯನೇಃ ಕೌಶಿಕಾಯನಿಃ ॥೧॥

ಈಗ ವಂಶವು : ಪೌತಿಮಾಷ್ಯನು ಗೌಪವನನಿಂದ, ಗೌಪವನನು ಪೌತಿಮಾಷ್ಯನಿಂದ, ಪೌತಿಮಾಷ್ಯನಿಂದ ಗೌಪವನನಿಂದ, ಗೌಪವನನು ಕೌಶಿಕ ನಿಂದ, ಕೌಶಿಕನು ಕೌಂಡಿನ್ಯನಿಂದ, ಕೌಂಡಿನ್ಯನು ಶಾಂಡಿಲ್ಯನಿಂದ, ಶಾಂಡಿಲ್ಯನು ಕೌಶಿಕನಿಂದಲೂ ಗೌತಮನಿಂದಲೂ, ಗೌತಮನು ಆಗ್ನಿವೇಶ್ಯನಿಂದ, ಅಗ್ನಿ ವೇಶ್ಯನು ಕೌಂಡಿಲ್ಯನಿಂದಲೂ, ಅನಭಿಮ್ಲಾತನಿಂದಲೂ ; ಅನಭಿಮ್ಲಾತನು ಅನಭಿಮ್ಲಾತನಿಂದ, ಅನಭಿಮ್ಲಾತನು ಆನಭಿಮ್ಲಾತನಿಂದ, ಅನಭಿಮ್ಲಾತನು ಗೌತಮನಿಂದ, ಗೌತಮನು ಸೈತವಪ್ರಾಚೀನಯೋಗ್ಯರುಗಳಿಂದ, ಸೈತವ ಪ್ರಾಚೀನಯೋಗ್ಯರುಗಳು ಪಾರಾಶರ್ಯನಿಂದ, ಪಾರಾಶರ್ಯನು ಭಾರದ್ವಾ

ಜನಿಂದ, ಭಾರದ್ವಾಜನುಭಾರದ್ವಾಜನಿಂದಲೂ, ಗೌತಮನಿಂದಲೂ, ಗೌತಮನು ಭಾರದ್ವಾಜನಿಂದ, ಭಾರದ್ವಾಜನು ಪಾರಾಶರ್ಯನಿಂದ, ಪಾರಾಶರ್ಯನು ಬೈಜವಾಪಾಯನನಿಂದ, ಬೈಜವಾಪಾಯನನು ಕೌಶಿಕಾಯನಿಯಿಂದ ; ಕೌಶಿಕಾಯನಿಯು.

ಘೃತಕೌಶಿಕಾದ್ಘೃತಕೌಶಿಕಃ ಪಾರಾಶರ್ಯಾಯಣಾತ್ ಪಾರಾಶರ್ಯಾಯಣಃ ಪಾರಾಶರ್ಯಾತ್ ಪಾರಾಶರ್ಯೋ ಜಾತೂಕರ್ಣ್ಯಾಜ್ಜಾತೂಕರ್ಣ್ಯ ಆಸುರಾಯಣಾಚ್ಚ ಯಾಸ್ಕಾಚ್ಚಾಸುರಾಯಣಸ್ತ್ರೈವಣೇರೌಪಜನ್ಧನೇ ರೌಪಜನ್ಧನಿರಾಸುರೇರಾಸುರಿರ್ಭಾರದ್ವಾಜಾದ್ ಭಾರದ್ವಾಜ ಆತ್ರೇಯಾದಾತ್ರೇಯೋ ಮಾಣ್ಟೇರ್ಮಾಣ್ಟಿರ್ಗೌತಮಾದ್ಗೌತಮೋ ಗೌತಮಾದ್ಗೌತಮೋ ವಾತ್ಸ್ಯಾದ್ವಾತ್ಸ್ಯಃ ಶಾಂಡಿಲ್ಯಾಚ್ಛಾಂಡಿಲ್ಯಃ ಕೈಶೋರ್ಯಾತ್ ಕಾಪ್ಯಾತ್ ಕೈಶೋರ್ಯಃ ಕಾಪ್ಯಃ ಕುಮಾರಹಾರಿತಾತ್ ಕುಮಾರಹಾರಿತೋ ಗಾಲವಾದ್ ಗಾಲವೋ ವಿದರ್ಭೀ ಕೌಂಡಿನ್ಯಾದ್ವಿದರ್ಭೀ ಕೌಂಡಿನ್ಯೋ ವತ್ಸನಪಾತೋ ಬಾಭ್ರವಾದ್ವತ್ಸನಪಾದ್ಬಾಭ್ರವಃ ಪಥಃ ಸೌಭರಾತ್ ಪನ್ಥಾಃ ಸೌಭರೋಽಯಾಸ್ಯಾದಾಂಗಿರಸಾದಯಾಸ್ಯ ಆಂಗಿರಸ ಆಭೂತೇಸ್ತ್ವಾಷ್ಟ್ರಾದಾಭೂತಿಸ್ತ್ವಾಷ್ಟ್ರೋ ವಿಶ್ವರೂಪಾತ್ತ್ವಾಷ್ಟ್ರಾದ್ವಿಶ್ವರೂಪಸ್ತ್ವಾಷ್ಟ್ರೋಽಶ್ವಿಭ್ಯಾಮಶ್ವಿನೌ ದಧೀಚ ಆಥರ್ವಣಾದಧ್ಯಙ್ಙಾಥರ್ವಣೋಽಥರ್ವಣೋದೈವಾದಥರ್ವಾ ದೈವೋ ಮೃತ್ಯೋಃ ಪ್ರಾಧ್ವಗ್ಂ ಸನಾನ್ಮೃತ್ಯುಃ ಪ್ರಾಧಗ್ಂ ಸನಃ ಪ್ರಧ್ವಗ್ಂ ಸನಾತ್ ಪ್ರಧ್ವಗ್ಂ ಸನ್ನ ಏಕರ್ಷೇ ರೇಕರ್ಷಿ ರ್ವಿಪ್ರಚಿತ್ತೇ ರ್ವಿಪ್ರಚಿತ್ತಿರ್ವ್ಯಷ್ಟೇ ರ್ವ್ಯಷ್ಟಿಃ ಸನಾರೋಃ ಸನಾರುಃ ಸನಾತನಾತ್ ಸನಾತನಃ ಸನಗಾತ್ ಸನಗಃ ಪರಮೇಷ್ಟಿನಃ ಪರಮೇಷ್ಠೀ ಬ್ರಹ್ಮಣೋ ಬ್ರಹ್ಮ ಸ್ವಯಂಭು ; ಬ್ರಹ್ಮಣೇ ನಮಃ ॥೨॥

ಘೃತಕೌಶಿಕನಿಂದ, ಘೃತಕೌಶಿಕನು ಪಾರಾಶರ್ಯಾಯಣನಿಂದ, ಪಾರಾಶರ್ಯಾಯಣನು ಪಾರಾಶರ್ಯನಿಂದ, ಪಾರಾಶರ್ಯನು ಜಾತೂಕರ್ಣ್ಯನಿಂದ, ಜಾತೂಕರ್ಣ್ಯನು ಆಸುರಾಯಣನಿಂದಲೂ ಯಾಸ್ಕನಿಂದಲೂ, ಆಸುರಾಯಣನು ತ್ರೈವಣಿಯಿಂದ, ತ್ರೈವಣಿಯು ಔಪಜಂಧನಿಯಿಂದ, ಔಪಜಂಧನಿಯು

ಆಸುರಿಯಿಂದ, ಆಸುರಿಯು ಭಾರದ್ವಾಜನಿಂದ, ಭಾರದ್ವಾಜನು ಆತ್ರೇಯನಿಂದ, ಆತ್ರೇಯನು ಮಾಂಟಿಯಿಂದ, ಮಾಂಟಿಯು ಗೌತಮನಿಂದ, ಗೌತಮನು ಗೌತಮನಿಂದ, ಗೌತಮನು ವಾತ್ಸ್ಯನಿಂದ, ವಾತ್ಸ್ಯನು ಶಾಂಡಿಲ್ಯನಿಂದ, ಶಾಂಡಿಲ್ಯನು ಕೈಶೋರ್ಯಕಾಪ್ಯನಿಂದ, ಕೈಶೋರಕಾಪ್ಯನು ಕುಮಾರಹಾರಿಕನಿಂದ, ಕುಮಾರಹಾರಿತನು ಗಾಲವನಿಂದ, ಗಾಲವನು ವಿದರ್ಭೀಕೌಂಡಿನ್ಯನಿಂದ, ವಿದರ್ಭೀಕೌಂಡಿನ್ಯನು ವತ್ಸನಪಾತ್‌ಬಾಭ್ರವನಿಂದ, ವತ್ಸನಪಾತ್‌ಬಾಭ್ರವನು ಪಂಥಸೌಭರನಿಂದ. ಪಂಥಸೌಭರನು ಆಯಾಸ್ಯ ಆಂಗಿರಸನಿಂದ, ಆಯಾಸ್ಯ ಅಂಗಿರಸನು ಆಭೂತಿತ್ವಾಷ್ಟ್ರನಿಂದ, ಆಭೂತಿತ್ವಾಷ್ಟ್ರನು ವಿಶ್ವರೂಪತ್ವಾಷ್ಟ್ರನಿಂದ, ವಿಶ್ವರೂಪತ್ವಾಷ್ಟ್ರನು ಅಶ್ವಿನಿಗಳಿಂದ, ಅಶ್ವಿನಿಗಳು ದಧ್ಯಙ್ಙಾಥರ್ವಣನಿಂದ. ದಧ್ಯಙ್ಙಾಥರ್ವಣನು ಅಥರ್ವದೈವನಿಂದ, ಅಥರ್ವದೈವನು ಮೃತ್ಯುಪ್ರಾಧ್ವಂಸನನಿಂದ. ಮೃತ್ಯುಪ್ರಾಧ್ವಂಸನನು ಪ್ರಧ್ವಂಸನನಿಂದ, ಪ್ರಧ್ವಂಸನನು ಏಕರ್ಷಿಯಿಂದ, ಏಕರ್ಷಿಯು ವಿಪ್ರಚಿತ್ತಿಯಿಂದ, ವಿಪ್ರಚಿತ್ತಿಯು ವ್ಯಷ್ಟಿಯಿಂದ, ವ್ಯಷ್ಟಿಯು ಸನಾರುವಿನಿಂದ, ಸನಾರುವು ಸನಾತನನಿಂದ, ಸನಾತನನು ಸನಗನಿಂದ, ಸನಗನು ಪರಮೇಷ್ಠಿಯಿಂದ, ಪರಮೇಷ್ಠಿಯು ಬ್ರಹ್ಮನಿಂದ, ಬ್ರಹ್ಮವು ಸ್ವಯಂಭು ; ಬ್ರಹ್ಮಕ್ಕೆ ನಮಸ್ಕಾರ.

